## ಈ ಸಂಚಿಕೆಯಲ್ಲಿ



ಇವಲ್ಲದೆ ನಗೆಹನಿ, ಚಿತ್ರ, ಪದ್ಯಗಳೂ ಇವೆ.

ಮೇ ತಿಂಗಳಿನಲ್ಲಿ ಪ್ರಾರಂಭಿಸಲ್ಪಡಲಿರುವ
**ಬೆಂಗಳೂರಿನ ನೂತನ ಚಿತ್ರಮಂದಿರ**
ಜೈಹಿಂದ್
ಸಿವಿಲ್ ಏರಿಯಾ : **ಆಪೆರಾ** ಮೈಸೂರು : **ಚಾಮುಂಡೇಶ್ವರಿ**
ಚಿತ್ರಮಂದಿರಗಳಲ್ಲಿ




ಪ್ರಮುಖಭೂಮಿಕೆಯಲ್ಲಿ :
ಶಾಂತಕುಮಾರಿ, ಲಲಿತ, ಗಿರಿಜ, ಮುಕ್ಕಾಮಲ,
ಲಕ್ಷ್ಮೀಪ್ರಭಾ, ಬಿ. ಎಸ್. ಆರ್.

ಡೈರೆಕ್ಷನ್ :
**ಪಿ. ಪುಲ್ಲಯ್ಯ** ಬಿ. ಎ.

ಸ್ಟುಡಿಯೋ :
**ವಾಹಿನಿ**

★

**A TALLAM RELEASE**

ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ

ಸಂಪುಟ ೮ : ಸಂಚಿಕೆ ೫

ಮೇ ೧೯೫೨

# ಗುರುದೇವ

ಬಿ. ರಾಮಚಂದ್ರ ಭಟ್ಟ, ಮುಂಡಾಜೆ.

ಗುರುವ ನಿಂದಿಸಬೇಡ
ಓ ಮುದ್ದು ತಮ್ಮ
ಗುರು ದಯವ ಗಳಿಸಿ
ನೀ ಬಾಳ ಬೆಳಗಮ್ಮ
ಗುರುರಾಯನೇ 'ಬ್ರಹ್ಮ'
ಗುರುವೆ 'ಸಿರಿ ಧರನು'
ಶಿರದಿ ಶಶಿಯನು ತಳೆದ
ಗುರುವು 'ಪರಶಿವನು'
ಧರೆಯೊಳಗೆ ಶಿಷ್ಯರಿಗೆ
ಗುರುವೆ 'ದೈವತವು'
ಗುರುವೆಂಬ 'ತಾರಕವು'
ಸಕಲ ಸಾಧನವು
ಗುರು ಕರುಣ ವಿಲ್ಲದೊಡೆ
ಉದ್ಧಾರವಿಲ್ಲ

ಗುರುವ ಸೇವಿಸಿದವಗೆ
ಭವಭಯಗಳಿಲ್ಲ
'ಗುರುದ್ರೋಹ' ಗೈದ
ಚಂದ್ರನು ಪತಿತನಾದ
'ಗುರುಭಕ್ತ' ಏಕಲವ್ಯನು
ಯೋದ್ಧನಾದ
ಗುರುವು ಮುನಿದರೆ ನಿಜದಿ
ಮುನಿವನೀಶ
ಗುರುವು ಹರಸಿದರೆ
ಹರಸುವನು ಪರಮೇಶ
ಮರೆ ಹೊಕ್ಕವರನು
'ಗುರುದೇವ' ತಾ ನೊಲಿವ
ಗುರುವು ಒಲಿದವರ
ತಾ ದೇವ ಕಾಪಿಡುವ









# ಮೂಷಕ ವಿವಾಹ

ಮುನಿವರನೊಬ್ಬನು ದಾರಿಯ ನಡೆಯುತ
ಇಲಿ ಮರಿಯೊಂದನೆ ನೋಡಿದನು
ಮನದಲಿ ಮರುಗಿ ತಪದ ಪ್ರಭಾವದಿ
ಇಲಿಯನೆ ಚೆಲುಬಾಲೆಯ ಮಾಡಿದನು.

ಮಾನವ ಕುಲದ ಮಾನಿನಿ ತೆರದಲಿ
ಮುದ್ದಿನಿಂದಲೇ ಪಾಲಿಸಿದ
ಮೋಹಕರೂಪದಿ ಯೌವನವೇರಲು
ಮದುವೆಗೆ ವರನನೆ ಶೋಧಿಸಿದ.

‘ ರವಿಗಿಂತಲು ಬಲಶಾಲಿಯ ಕಾಣೆನು
ಆತನೆ ಕುವರಿಗೆ ಸರಿವರನು’
ಎಂದೆನುತ್ತಲಿ ಸೂರ್ಯನ ಧ್ಯಾನಿಸಿ
ಕುವರಿಯ ಕೈವಿಡಿಯೆಂದುಸುರಿದನು.

ರವಿಯುಂತರುಹಿದ ಕುವರಿಯ ನೋಡಿ
“ ಮೇಘವು ನನಗಿಂತಲು ಗಟ್ಟಿ
ಆತನ ಮುಂದೆ ನನ್ನ ಪ್ರಭಾವವು
ವ್ಯರ್ಥವು ಕೇಳಾತನ ಮನಮುಟ್ಟಿ.”

ಮೇಘನ ಕುರಿತು ಮುನಿಬೇಡಿದನು
ಮೇಘನು ಗಾಭರಿ ಹೊಂದಿದನು
“ ನೋಡೆಲೆ, ಮುನಿವರ ನಿನ್ನೀ ಕುವರಿಗೆ
ಮಾರುತನೇ ಸರಿ ”—ಗುಡುಗಿದನು.

" ಕಮಲಪ್ರಿಯ "
ಮ ದ ರಾ ಸು.

" ನಿಜ, ನಿಜ, ಮಾರುತ ಬಲಯುತನು
ಆತನು ಬೀಸಲು ಮೇಘನು ನಿಲ್ಲನು
ಗಾವುದ ದೂರಕೆ ಓಡುವನು "
ಎನುತಲಿ ಮುನಿವರ ಸಾಗಿದನು.

" ವಾಯುದೇವನೆ ಲೋಕಪಾಲನೆ
ನೀನೇ ಕರವಿಡಿ ಕುವರಿಯನು
ತಕ್ಕ ವರನಿಹೆ ಕರುಣತೋರ್ರೈ "
ಎಂದತಿ ದೈನ್ಯದಿ ಬೇಡಿದನು.

ವಾಯು ಕರುಣದಿ ಮುನಿಗೆ ನಮಿಸಿ
ದೀರ್ಘದಂಡದಿ, ನುಡಿದನು
" ಸ್ವಾಮಿ, ಗೋಡೆಯೆ ಶೂರನಿಹನು
ಆತನೆಡೆ ನಾ ದೀನನು. "

ವಾಯು ಮಾತನೆ ಮುನಿಯು ನಂಬಿ
ಗೋಡೆಯನೇ ತಾ ಬೇಡಿದನು
" ಬೇಡ ಬೇಡ " ವೆನುತ್ತ ಗೋಡೆಯು
ಇಲಿಯ ಹಿರಿಮೆಯು ತೋರಿದನು.

ಇಲಿಯೊಂದಲ್ಲಿ ಗೋಡೆಯ ಭೇದಿಸಿ
ತೋರಲು ಶೌರ್ಯಕೆ ಮುನಿ ಮೆಚ್ಚಿದನು
ಇಲಿಗೆ ಇಲಿಯೇ ಸಾಟಿಯೆನುತ್ತಲಿ
ಇಲಿಗೇ ಇಲಿಬಾಲೆಯ ಕಟ್ಟಿದನು.







## ಜಗಳಕ್ಕೆ ಔಷಧ

ಸಿ. ಎಸ್. ರಾವ್, ಉಡುಪಿ.

ಸೋಮಿಯ ಗಂಡನು ಲಿಂಗನು ಎಂಬವ
ಕಡು ಕೋಪಿಷ್ಠನು ಅದು ದಿಟವು.
ಕರುಣೆಯೆ ಇಲ್ಲದೆ ಹೊಡೆಯುತ ಮಡದಿಯ
ಗೋಳಾಡಿಸುವನು ಅನುದಿನವು.

ಇಂತಿರಲೊಂದಿನ ಗಂಡನು ಹೊಡೆಯಲು
ಸಹಿಸಲು ಆಗದೆ ಓಡಿದಳು
ತನ್ನಯ ಕಷ್ಟವ ಒರೆಯಲು ನೆರೆಮನೆ
ಮುದುಕಿಯ ಬಳಿ ತಾ ಸಾರಿದಳು.

ಬಡ ದಂಪತಿಗಳ ಜಗಳದ ಗುಟ್ಟನು
ಅರಿತಿಹ ಮುದುಕಿಯು ಸೋಮಿಯನು
ಕರುಣಿಸೆ ಆಕೆಯ ಕೈಯಲಿ ಕೊಟ್ಟಳು
‘ ಔಷಧ ’ ಎನ್ನುತ ಸೀಸೆಯನು.

“ ನಲ್ಲಗೆ ಕೋಪವು ಬರಲೀ ಔಷಧ
ಹಾಕಿಕೊಳುವುದು ನೀ ಬಾಯೊಳಗೆ
ಅವನಿಗೆ ಕೋಪವು ಹೋಗಲು ಆಗಲೆ
ಉಗುಳುವುದೂ ಔಷಧ ಹೊರಗೆ. ”

“ ಈ ತೆರದಲಿ ನೀ ಔಷಧ ಕುಡಿಯಲು
ಹೊಡೆಯನು ತಾ ನಿನ್ನನು ಪತಿಯು,
ಬರುವುದು ನೀ ತಾ ಎನ್ನಯ ಮನೆಕಡೆ
ಬರಿದಾಗಲು ಈ ಔಷಧಿಯು. ”

ಮುದುಕಿಯು ನುಡಿದೀ ಮಾತನು ಕೇಳುತ
ಸಂತಸಗೊಂಡಳು ಮನದಲ್ಲೆ
ಔಷಧಿಯೊಂದಿಗೆ ಆ ಬಡ ಸೋಮಿಯು
ಹೊರಟಳು ಮನೆಗಾ ಕ್ಷಣದಲ್ಲೆ.

ಸೋಮಿಗೆ ಲಿಂಗನು ಹೊಡೆವುದು ನಿಂತಿತು
ಆಕೆಯು ಔಷಧ ಸೇವಿಸಲು,
ಮುದುಕಿಯ ಮನೆಕಡೆ ಹೊರಟಳು ಔಷಧ-
ವಿಹ ಸೀಸೆಯು ಬರಿದಾಗಿರಲು-

ಪರಿಪರಿ ವಿಧದಲಿ ಮುದುಕಿಯ ಹೊಗಳುತ
ಹರುಷದಿ ಆಕೆಯು ಬಳಿಯಲ್ಲಿ
ಸೋಮಿಯು ಔಷಧ ಕೇಳಲು ಮುದುಕಿಯು
ನಗುತ ನುಡಿದಳೀ ತೆರದಲ್ಲಿ.

“ ಕೇಳೆಲೆ ಮಗಳೇ, ಔಷಧವನು ನಾ
ಪಾಠವ ಕಲಿಸಲು ಕೊಟ್ಟಿಹೆನು.
ನನ್ನಯ ಮಾತಿನ ತೆರದಲಿ ನಡೆವೊಡೆ
ಜಗಳದ ಗುಟ್ಟನು ಅರುಹುವೆನು. ”

“ ನಿನ್ನಯ ಇನಿಯಗೆ ಕಡುಕೋಪವು ಬರೆ
ಅವನಿಗೆ ಎದುರಾಡುವಿ ಬರಿದೆ,
ಬೆಂಕಿಗೆ ತುಪ್ಪವ ಎರೆದಂತಾಗಲು
ಹೊಡೆವನು ನಿನ್ನನು ನಿರ್ದಯದೆ.”

“ ಎದುರಾಡುವುದನು ನಿಲಿಸಲು ಕೊಟ್ಟಿಹೆ
ನೀರನು ಔಷಧ ಎನ್ನುತಲಿ
ನಿನ್ನಯ ನಾಲಿಗೆ ಏನನು ಆಡದು
ಉದಕವು ತುಂಬಿಹ ಬಾಯಿಯಲಿ.”

“ ಗಂಡನ ಕೆಲಸವ ಹರುಷದಿ ಮಾಡುತ
ಅವನನು ಸಂತಸಪಡಿಸುವುದು
ನಲ್ಲನ ನುಡಿಗೆದುರಾಡದೆ ಕೇಳುತ
ಲಿರುವುದು ಪತ್ನಿಯ ಧರ್ಮವದು.”




**ಈ**ಗ್ಯೆ ಸುಮಾರು ಎಂಟುನೂರು ವರ್ಷಗಳ ಕೆಳಗೆ ವಿಕ್ರಮರಾಜಪುರದಲ್ಲಿ ಒಂದು ಪ್ರಸಿದ್ಧ ದೇವಾಲಯವಿತ್ತು. ಆ ದೇವಾಲಯಕ್ಕೆ ಮುವತ್ತು ಮೂರು ಮಂಟಪಗಳಿದ್ದವು. ಗೋಪುರದ ಮೇಲಿನ ಬೊಂಬೆಗಳೂ, ಗುಡಿಯೊಳಗಿನ ವಿಗ್ರಹಗಳೂ ಸೇರಿ ಒಟ್ಟು **33,333** ಸ್ವರೂಪಗಳಿತ್ತೆಂದು ಪ್ರತೀತಿ.

ಆ ದೇವಾಲಯವನ್ನು ನಿರ್ಮಿಸುವ ಮುನ್ನ ಆ ಸಮೀಪದಲ್ಲಿ ಒಂದು ಅತಿಭಾರಿ ಅರಳಿಮರವಿತ್ತು. ಬಹಳ ದೂರ ವ್ಯಾಪಿಸಿದ್ದ ಅದರ ನೆರಳಿನಲ್ಲಿ ಮಕ್ಕಳು ಆಟಆಡಿಕೊಳ್ಳುತ್ತಿದ್ದರು. ಪ್ರಯಾಣಿಕರು ಅಲ್ಲಿ ಕುಳಿತು ಆಯಾಸ ಪರಿಹರಿಸಿಕೊಳ್ಳುತ್ತಿದ್ದರು. ಗ್ರಾಮದ ಹಿರಿಯರು ಆ ಮರದ ಕೆಳಗೆ ಕುಳಿತು ತೀರ್ಪು ಕೊಡುತ್ತಿದ್ದರು.

ಹೀಗಿರಲು ಒಂದು ಸೇತುವೆಯನ್ನು ನಿರ್ಮಿಸಲು ಆ ಮರವನ್ನು ಕೆಡವಬೇಕೆಂದು ರಾಜಾಜ್ಞೆ ಆಯಿತು.

ಆ ಅರಳಿಮರದ ಸಮೀಪದಲ್ಲಿ ಸುಧನ್ವನೆಂಬ ಒಬ್ಬ ರೈತನಿದ್ದ. "ನೂರು ವರ್ಷಗಳಿಂದ ಇರುವ ಈ ಮಹಾವೃಕ್ಷವನ್ನು ಕಡಿಸಿಹಾಕುವುದೇ? ಎಷ್ಟು ಜನಕ್ಕೆ ಇದು ಸಹಾಯವಾಗಿದೆ! ಎಷ್ಟು ಪ್ರಾಣಿಗಳಿಗಿದು ಆನಂದವನ್ನುಂಟುಮಾಡುತ್ತಿದೆ. ಇಂತಹ ಮರವನ್ನು ಕಡಿಯಲು ಕೈಯಾದರೂ ಹೇಗೆ ಬರುತ್ತದೆ? ಇದನ್ನು ಕೆಡವಬೇಡಿ. ನಿಮಗೆ ಹಾಗೆ ಹಲಗೆಗಳು ಬೇಕಾದರೆ ನನ್ನ ತೋಟದಲ್ಲಿರುವ ಮರಗಳನ್ನು ಕೆಡವಿ ತೆಗೆದುಕೊಳ್ಳಿ" ಎಂದು ರಾಜನಲ್ಲಿ ಬಿನ್ನವಿಸಿಕೊಂಡ.

ರಾಜನು ಇದಕ್ಕೆ ಸಮ್ಮತಿಸಿದ. ಅಷ್ಟಕ್ಕೆ ನಿಂತಿತು ಈ ಸಮಸ್ಯೆ.

ಕೆಲವುದಿನಗಳಾದ ತರುವಾಯ ಒಂದು ಸಾಯಂಕಾಲ ಸುಧನ್ವ ಹೊಲದಿಂದ ಮನೆಗೆ ಹಿಂತಿರುಗುತ್ತಿರುವಾಗ, ಆ ಅರಳಿಮರದ ಕೆಳಗೆ ತ್ರಿಲೋಕಸುಂದರಿ ಎಂದು ಹೇಳಬಹುದಾದಂತಹ ಒಬ್ಬ ತರುಣಿ ಕಾಣಿಸಿದಳು.

'ರಂಗರಾಜ' - ಬೆಂಗಳೂರು




ಆಕೆಯ ಅಪೂರ್ವ ಅಂದಕ್ಕೆ ಆತನು ಆಶ್ಚರ್ಯ ಗೊಂಡ. ಆತನಾಕೆಯನ್ನು ಮಾತನಾಡಿಸಬೇಕೆಂದಿರುವಷ್ಟರಲ್ಲಿ ಆಕೆ ಅದೃಶ್ಯವಾದಳು.

ರಾತ್ರಿಯೆಲ್ಲಾ ಆತನಿಗೆ ನಿದ್ದೆ ಹತ್ತಲಿಲ್ಲ. 'ಈ ವಿಚಿತ್ರಳಾದ ತರುಣಿ ಯಾರು?' ಎಂಬ ಪ್ರಶ್ನೆ ಆತನ ಮನಸ್ಸನ್ನು ಸಂಪೂರ್ಣವಾಗಿ ಆವರಿಸಿತು. ಮಾರನೆಯದಿನ ಎಂದಿನಂತೆ ಹೊಲಕ್ಕೆ ಹೊರಟ. ಆದರೆ ಯಾವ ಕೆಲಸ ಮಾಡಲೂ ಮನವು ಬಾರದು. ಸಾಯಂಕಾಲ ಮನೆಗೆ ಹಿಂತಿರುಗುವಾಗ ಮತ್ತೆ ಆ ತರುಣಿ ಕಾಣಿಸಿದಳು. ಆಶ್ಚರ್ಯಚಕಿತನಾದ.

"ಸುಧನ್ವಾ, ನಿನ್ನ ತಾತ ತಂದೆಯರು ಮೊದಲುಗೊಂಡು ನಾನು ನಿಮ್ಮನ್ನು ಬಲ್ಲೆ. ಒಳ್ಳೇ ಸಂಪ್ರದಾಯಸ್ಥ ಕುಟುಂಬ ನಿಮ್ಮದು. ನೀನು ಸುಹೃದಯನು. ಒಂದು ವಾಗ್ದಾನ ಕೊಟ್ಟೆಯೆಂದರೆ ನಾನು ನಿನ್ನನ್ನು ವಿವಾಹವಾಗಿ ನಿನ್ನ ಚರಣದಾಸಿಯಾಗಿರುವೆನು" ಎಂದು ತನ್ನ ಮನೋಭಿಲಾಷೆಯನ್ನು ವ್ಯಕ್ತಪಡಿಸಿದಳು.

"ನಾನು ಮಾಡಬೇಕಾದ ವಾಗ್ದಾನ ಯಾವುದೋ ಹೇಳು" ಎಂದ ಸುಧನ್ವ.

ಅದಕ್ಕೆ ಆಕೆ ಅಂದಳು: "ಎಂದೂ ನನ್ನ ಜನ್ಮರಹಸ್ಯವನ್ನು ಕೇಳಬಾರದು. ಸಮಯ ಬಂದಾಗ ನಾನೇ ನಿನಗೆ ಅರುಹುವೆನು" ಆತನು ಆ ಷರತ್ತಿಗೆ ಅಂಗೀಕಾರ ಸೂಚಿಸಿದ.

ಅವರಿಗೆ ವಿವಾಹವಾಯಿತು. ಒಂದುವರ್ಷಕ್ಕೆಲ್ಲಾ ಅವರಿಗೆ ಮುದ್ದಾದ ಮಗ ಹುಟ್ಟಿದ. ಮಗುವಿಗೆ ಐದು ವರ್ಷವಾಯಿತು. ಅತಿ ಮಮತೆಯಿಂದ ಬೆಳೆದ ಆ ಹುಡುಗ.

ಹೀಗಿರಲು, ವಿಕ್ರಮಪುರದಲ್ಲಿ ಒಂದು ಅಪೂರ್ವ ದೇವಸ್ಥಾನವನ್ನು ಕಟ್ಟಿಸಬೇಕೆಂದೂ, ಅದಕ್ಕಾಗಿ ಈ ಮರದ ಹಲಗೆಗಳೇ ಬೇಕೆಂದೂ, ಈ ವಿಷಯದಲ್ಲಿ ಯಾರೂ ಅಡ್ಡಿ ಆತಂಕಗಳನ್ನು ಒಡ್ಡಕೂಡದೆಂದೂ ಮತ್ತೆ ರಾಜಾಜ್ಞೆ ಬಂತು.

ಕೆಲಸಗಾರರು ಬಂದರು. ಹರಿತವಾದ ಕೊಡಲಿಗಳನ್ನು ತಂದರು. ಚಕಚಕನೆ ಮರವನ್ನು ಕಡಿಯಲು ಪ್ರಾರಂಭಿಸಿದರು. ಎಷ್ಟೋ ವರ್ಷಗಳಿಂದ ಕಣ್ಣಿಗೆ ಸೊಂಪಾಗಿ ಆ ಪ್ರದೇಶದಲ್ಲಿದ್ದು, ಯಾವುದೇ ಪ್ರತಿಫಲವನ್ನು ಅಪೇಕ್ಷಿಸದೆ ಲಕ್ಷಾಂತರ ಜೀವಗಳಿಗೆ ಆಶ್ರಯವನ್ನೂ, ಆನಂದವನ್ನೂ ಕೊಡುತ್ತಿದ್ದ ಆ

ಮಹಾವೃಕ್ಷವನ್ನು ತಮ್ಮ ಹರಿತವಾದ ಕೊಡಲಿಗಳಿಂದ ಚಕಚಕನೆ ಕಡಿಯುತ್ತಿದ್ದಾರೆ. ರಾಜಾಜ್ಞೆಯಲ್ಲವೇ? ಬದಲು ಹೇಳಲು ಯಾರಿಗೆ ಧೈರ್ಯವಿದೆ?

ಮತ್ತೆ ಕೆಲವುದಿನಗಳು ಕಳೆದಮೇಲೆ ಒಂದುರಾತ್ರಿ ಮರವನ್ನು ಕಡಿಯುವ ಶಬ್ದ ಕೇಳಿಸಿತು ಸುಧನ್ವನಿಗೆ. ಹೆಂಡತಿ ಬಂದು ಆತನ ಪಕ್ಕದಲ್ಲಿ ಕುಳಿತಿದ್ದಳು. ಕಣ್ಣೀರು ಆಕೆಯ ಕಪೋಲಗಳ ಮೇಲೆ ಜೊಳಜೊಳನೆ ಸುರಿಯುತಿತ್ತು. "ಸುಧನ್ವಾ, ಇದು ಕನಸಲ್ಲ. ನಾನು ಆಡುವ ಮಾತುಗಳನ್ನು ನಂಬು. ನನ್ನ ಮಾತಿನಲ್ಲಿ ಅಪಾರ ಗೌರವವಿಟ್ಟಿದ್ದೆ ನೀನು. ಈ ಆರು ವರ್ಷಗಳಲ್ಲಿ ನನ್ನ ಜನ್ಮರಹಸ್ಯ ಬಯಲುಪಡಿಸುವ ಅಗತ್ಯ ಈಗ ಒದಗಿದೆ. ನಾನು ಈ ಮಹಾವೃಕ್ಷದ ಆತ್ಮ. ನಿನ್ನನ್ನು ಚಿರಕಾಲ ಸೇವಿಸಿ ಸೌಖ್ಯವನ್ನುಂಟು ಮಾಡಬೇಕೆಂದು ಎಣಿಸಿದ್ದೆ. ಆದರೆ ವಿಧಿನಿಯಮ ಬೇರೆಯಾಗಿದೆ. ಕೆಲಸಗಾರರು ಹೊಡೆಯುವ ಒಂದೊಂದು ಕೊಡಲಿಯ ಪೆಟ್ಟೂ ಮರಕ್ಕಲ್ಲ, ನನ್ನ ಶರೀರಕ್ಕೆ ತಗಲುತ್ತಿದೆ. ನಾನಿನ್ನು ತಾಳಲಾರೆ. ನನ್ನ ಕಾಲವು ಸನ್ನಿಹಿತವಾಗಿದೆ. ಇನ್ನು ತುಸಹೊತ್ತಿನಲ್ಲಿ ಆ ಮರ ಕೆಳಗೆ ಉರುಳುವುದು, ನಾನು ಸತ್ತುಹೋಗುವೆನು. ಮುದ್ದುಕಂದನ್ಮನ ಚೇಷ್ಟೆಗಳನ್ನು ಕಣ್ಣಾರೆ ಕಾಣುವೆನೆಂದು ನೆನೆಸಿದ್ದೆ. ನನಗೆ ಆ ಪ್ರಾಪ್ತಿಯಿಲ್ಲ. ನನ್ನ ಜ್ಞಾಪಕಾರ್ಥವಾಗಿ ಆ ಮಗುವನ್ನು ಜಾಗರೂಕತೆಯಿಂದ ನೋಡಿಕೊ.



ನೀನು ತುಂಬಾ ಕೋಮಲಹೃದಯಿ. ನಿನ್ನನ್ನು ದೇವರು ಕಾಪಾಡುವನು. ನನಗಿನ್ನು ಅಪ್ಪಣೆ ಕೊಡು" ಎಂದೆನ್ನುತ್ತಾ ಗಂಡನಪಾದಗಳಿಗೆ ಭಕ್ತಿಪೂರ್ವಕವಾಗಿ ನಮಸ್ಕಾರಮಾಡಿ ಅಂತರ್ಧಾನ ಹೊಂದಿದಳು.

ಸುಧನ್ವನು ಎದ್ದ. ಮಗ ಸಹ ಎದ್ದ. ತಾಯಿಗಾಗಿ ಒಂದೇಸವನೆ ಅಳಹತ್ತಿದ. ತಂದೆ ಸಮಾಧಾನಮಾಡಿದ. ತಂದೆ ಮಗ ಇಬ್ಬರೂ ಆ ಮರವಿದ್ದ ಪ್ರದೇಶವನ್ನು ಸೇರಿಕೊಂಡರು. ಆ ವೇಳೆಗಾಗಲೇ ಕೆಲಸಗಾರರು ಮರವನ್ನು ಬೀಳಿಸಿದ್ದರು. ರೆಂಬೆಗಳನ್ನೆಲ್ಲಾ ಒಂದುಕಡೆ ಕುಪ್ಪೆಹಾಕಿದ್ದರು. ಬ್ರಹ್ಮಾಂಡವಾದ ಮುಂಡ ನೆಲದಮೇಲೆ ಒಂದುಕಡೆ ಬಿದ್ದಿದೆ.

ಸುಧನ್ವನೂ ಆತನ ಮಗನೂ ಆ ದೃಶ್ಯವನ್ನು ನೋಡಿ ಬಿಕ್ಕಿಬಿಕ್ಕಿ ಅತ್ತರು. ಅವರು

ಯಾಕೆ ಅಳುತ್ತಿರುವರೋ ಯಾರಿಗೂ ತಿಳಿಯದು.

ಪಕ್ಕದಲ್ಲಿದ್ದ ನದಿಗೆ ಆ ಮರವನ್ನು ಉರುಳಿಸಿಕೊಂಡು ಹೋಗಬೇಕು. ನೂರುಜನ ಸೇರಿ ನೂಕಿದರು. ಮರ ಕದಲಲಿಲ್ಲ. ಊರಿನಲ್ಲಿರುವ ಜನರೆಲ್ಲಾ ಬಂದು ನೂಕಿನೋಡಿದರು. ಅದು ಕದಲಲಿಲ್ಲ. ಹೊರಗಿನ ಗ್ರಾಮಗಳಿಂದ ಅನೇಕ ಬಲಶಾಲಿಗಳು ಬಂದರು. ಪ್ರಯತ್ನ ಮಾಡಿ ನೋಡಿದರು. ಲಾಭವಿಲ್ಲದಾಯಿತು. ಏನಿದು ಸೋಜಿಗ! ಜನರೆಲ್ಲಾ ಚಕಿತರಾದರು.

ಆ ರಾತ್ರಿ ರಾಜನಿಗೊಂದು ಕನಸು ಬಿತ್ತು. ಸುಧನ್ವನಿಗೂ ಈ ಮಹಾವೃಕ್ಷಕ್ಕೂ ಇರುವ ಸಂಬಂಧ ತಿಳಿಯಿತು. ಕೂಡಲೆ ರಾಜ ಎಚ್ಚರಗೊಂಡ. ಸುಧನ್ವನು ಯಾಕೆ ಮರವನ್ನು ಕಡಿಯಬೇಡವೆಂದು ಹೇಳಿದನೋ ಜನರಿಗೆ ತಿಳಿಯ ಹೇಳಿದ. ಈಗ ಏನೆಂದುಕೊಂಡರೆ ತಾನೇ ಏನಿದೆ?

ರಾಜನು ಸುಧನ್ವನ ಕ್ಷಮಾಪಣೆ ಕೇಳಿದ. ಸುಧನ್ವನ ಸಲಹೆಯಮೇರೆಗೆ ಅತಿವೈಭವವಾಗಿ ಪೂಜೆ ಉತ್ಸವಗಳನ್ನೂ ನಡೆಸಿದ. ಮತ್ತೆ ಕದಲಿಸಿ ನೋಡಿದ. ಕದಲಲಿಲ್ಲ ಆ ಮರದ ಮುಂಡ!

ಆಗ ಸುಧನ್ವನು ಮಗನೊಂದಿಗೆ "ಮಗೂ, ಅಮ್ಮನನ್ನು ಮಾತಾಡಿಸು. ನೀನೆಂದರೆ ಅಮ್ಮನಿಗೆ ಪ್ರಾಣ. ನಿನ್ನಮಾತು ತೆಗೆದುಹಾಕಲಾರಳು" ಎಂದ.

ತಂದೆ ಹೇಳಿದಮೇರೆಗೆ ಆ ಹುಡುಗ ಆ ಮರದ ಮೇಲೆ ಕೈಹಾಕಿ "ಅಮ್ಮಾ" ಎಂದು ಕೂಗಿದ. ಆ ಕೂಡಲೇ ಮರವು ಕದಲಿತು.

ಸಾವಿರಾರು ಬಲಶಾಲಿಗಳು ಅಲ್ಲಾಡಿಸಲಾರದ ಆ ಮರ, ಆ ಮಗು ಕೈಹಾಕಿದ ಕೂಡಲೇ ಕದಲುವುದನ್ನು ಕಂಡು ಅಲ್ಲಿ ನೆರೆದಿದ್ದ ಜನರೆಲ್ಲಾ ನಿಶ್ಚೇಷ್ಟಿತರಾಗಿ, ಕಣ್ಣೀರು ಸುರಿಸಿದರು.

ತರುವಾಯ ಆಕೆಯ ಹೆಸರಿನಲ್ಲೇ ರಾಜನು ಆ ಅರಳಿಮರದ ಹಲಗೆಗಳನ್ನು ಉಪಯೋಗಿಸಿ, ಒಂದು ಅದ್ಭುತ ದೇವಾಲಯವನ್ನು ಕಟ್ಟಿಸಿದ. ವಿಕ್ರಮರಾಜಪುರದಲ್ಲಿ ಎಂಟು ನೂರು ವರ್ಷಗಳ ಕೆಳಗೆ 33 ಮಂಟಪಗಳೊಂದಿಗೆ 33,333 ವಿಗ್ರಹಗಳೊಂದಿಗೆ ಇದ್ದ ಆ ಪ್ರಸಿದ್ಧ ದೇವಾಲಯವು ಇದೇ?






## 4

ಮಂತ್ರಿಯ ಆಜ್ಞೆ ಪ್ರಕಾರ ಭಟರೆಲ್ಲಾ ವೃದ್ಧಳಿಗಾಗಿ ರಾಜ್ಯವನ್ನೆಲ್ಲಾ ಶೋಧಿಸಲು ಹೊರಟ ವಿಷಯ ಹೇಳಿದ್ದೆವಷ್ಟೆ. ವಾರಗಳು, ತಿಂಗಳುಗಳು ಕಳೆಯುತ್ತಿವೆ. ಹೋದವರು ಒಬ್ಬರಾದರೂ ಹಿಂತಿರುಗಿ ಬರುವ ಸೂಚನೆಗಳು ಕಾಣಿಸಲಿಲ್ಲ. ಅವರಿಗಾಗಿ ಎದುರು ನೋಡುತ್ತಿದ್ದ ಮಂತ್ರಿಗೆ ಒಂದೊಂದು ದಿನವೂ ಒಂದೊಂದು ಯುಗವೆ ಆದಹಾಗೆ ತೋರುತಿತ್ತು.

ಆದರೆ ವೃದ್ಧಳು ಬರಲಿ ಬಿಡಲಿ, ಮಂತ್ರಿಗೆ ಆಕೆಯನ್ನು ಕುರಿತ ವಿಷಯವೊಂದೇ ಅಲ್ಲ ಮುಖ್ಯ. ಹಗಲೂ ರಾತ್ರಿ ಆತನ ಮನವನ್ನು ಆಕರ್ಷಿಸುತ್ತಿದ್ದ ವಿಷಯಗಳು ಹಲವಾರು. ಅತ್ತ ರಾಜಕುಮಾರನ ಮರಣದ ಮರ್ಮವನ್ನು ಕಂಡು ಹಿಡಿಯಬೇಕು. ಇತ್ತ ರಾಣಿಯ ಮರಣಕ್ಕೆ ಕಾರಣವೇನೋ ಅರಿತುಕೊಳ್ಳಬೇಕು. ಈರೀತಿ ತಾನಾಗಿ ತಲೆಯಮೇಲೆ ಹಾಕಿಕೊಂಡಿದ್ದ ಜವಾಬ್ದಾರಿ ಅನೇಕ, ಅಪಾರವಾದುದು.

ಪರಿಸ್ಥಿತಿ ಹೀಗಿರುವಲ್ಲಿ ಮಂತ್ರಿಗೆ ಊಟ ರುಚಿಸಲಿಲ್ಲ, ನಿದ್ರೆಬರಲಿಲ್ಲ ಎಂದರೆ ಆಶ್ಚರ್ಯವಾದರೂ ಏನಿದೆ? ಯಾವಕ್ಷಣ ಯಾವಸುದ್ಧಿ ಕೇಳುವೆನೋ ಎಂದು ಆತನು ಕಿವಿಗಳನ್ನು ತೆರೆದಿಟ್ಟುಕೊಂಡಿದ್ದ. ತಾನು ಕಳುಹಿಸಿದ ಭಟರು ಯಾವಾಗ ಹಿಂದಿರುಗುವರೋ ಎಂದು ಎವೆಯಿಕ್ಕದೆ ನೋಡುತ್ತಿದ್ದಾನೆ. ಇನ್ನು ಆತನ ಮೆದುಳು ವಿಶ್ರಾಂತಿಯನ್ನರಿಯದೆ ಪರಿಪರಿವಿಧದಲ್ಲಿ ತುಂಬಾ ಚುರುಕಾಗಿ ಕೆಲಸ ಮಾಡುತ್ತಿತ್ತೆಂದು ಬೇರೆ ಹೇಳಬೇಕೆ?

ಈ ಮನೋವೇದನೆಯಿಂದ ಮಂತ್ರಿ ಇದ್ದಕ್ಕಿದ್ದಂತೆಯೇ ಒಂದುದಿನ ರಾತ್ರಿ ಏಕಾಕಿಯಾಗಿ ವೈದ್ಯನನ್ನು ಬಂಧಿಸಿದ್ದ ಕೋಣೆಗೆ ಹೋದ. ತಂದೆತಾಯಿಗಳಂತೆ ಎಣಿಸಿದ್ದ ದೇವಪ್ರಿಯ



ಕೃಪಾಸಿಂಹರು ಮರಣವಾದ್ದರಿಂದ ಆಸ್ಥಾನ ವೈದ್ಯನು ಮಾನಸಿಕ ಯಾತನೆಗೆ ಗುರಿಯಾಗಿದ್ದ. ಅದರಮೇಲೆ, ಅನಿರೀಕ್ಷಿತವಾಗಿ ತನ್ನಮೇಲೆ ಬಂದುಬಿದ್ದ ಅಪನಿಂದೆಯಿಂದ, ಸುಖವಾಗಿ ಬದುಕಿ ಬಾಳುತ್ತಿದ್ದ ಆಸ್ಥಾನವೈದ್ಯನು, ಈಗ ಕೇವಲ ಜೀವಶ್ರವವಾಗಿದ್ದ.

ಈ ಸ್ಥಿತಿಯಲ್ಲಿದ್ದ ವೈದ್ಯನನ್ನು ಏನೆಂದು ತಾನೇ ಮಾತನಾಡಿಸುವುದು? ಮಂತ್ರಿಗೆ ಏನೂ ಹೊಳೆಯದಾಯಿತು. ನಿಜ ಹೇಳ ಬೇಕೆಂದರೆ, ವೈದ್ಯನ ಮನಸ್ಸು ಏನಾದರೂ ಬದಲಾವಣೆ ಹೊಂದಿತೇನೋ ಎಂದು ಕಂಡು ಹಿಡಿಯಲು, ಅಥವಾ ಆತನಿಂದ ಪ್ರಾಯಶಃ ಏನಾದರೊಂದು ಹೊಸ ಸುಳುಹು ತಿಳಿಯ ಬಹುದೆಂದುಕೊಂಡಿದ್ದ ಮಂತ್ರಿ. ಆದರೆ ಮಂತ್ರಿ ಕಣ್ಣಿಗೆ ಬಿದ್ದಕೂಡಲೇ ವೈದ್ಯನು ರಾಜ ರಾಣಿ ಯರನ್ನು ಜ್ಞಾಪಿಸಿಕೊಂಡು ಗಳಗಳನೆ ಅತ್ತ. ಆಗ ಮಂತ್ರಿಯೇ ಆತನನ್ನು ಸಮಾಧಾನ ಪಡಿಸಬೇಕಾಯಿತು. ಇದರಿಂದ ವೈದ್ಯನು ನಿರ್ದೋಷಿಯೆಂದು ಮಂತ್ರಿಗೆ ಖಾತ್ರಿ ಯಾಯಿತು. ಅಲ್ಲಿಂದ ಆತನು ದಾದಿಯನ್ನು ಬಂಧಿಸಿದ್ದ ಕೋಣೆಗೆ ಹೋದ.

ಅಪರಾತ್ರಿಯಲ್ಲಿ ಏಕಾಕಿಯಾಗಿ ಮಂತ್ರಿ ಬಂದುದನ್ನು ನೋಡಿ ದಾದಿ ಹೆದರಿಕೊಂಡಳು. ಆದರೆ ಬೇಗ ಚೇತರಿಸಿಕೊಂಡು ಮನಸ್ಸನ್ನು ಸ್ಥಿಮಿತಕ್ಕೆ ತಂದುಕೊಂಡಳು.

"ದಾದಿ, ನಮ್ಮ ರಾಜವಂಶ ಎಷ್ಟರಲ್ಲಿ ಹೇಗೆ ಆಯಿತು ನೋಡಿದೆಯಾ?" ಎಂದು ಸಹಾನುಭೂತಿ ತೋರಿಸಿದ ಮಂತ್ರಿ. 'ವಿಷ ಪೂರಿತವಾದ ಹಾಲು ಕಣ್ಣಮುಂದೆ ಸ್ಪಷ್ಟ ವಾಗಿ ಕಾಣಿಸುತ್ತಿರುವಾಗ, ರಾಣಿಯು ಮರಣಹೊಂದಿದ್ದು ಕೇವಲ ದೈವಸಂಘಟನೆ ಎಂದು ಯಾರು ನಂಬುತ್ತಾರೆ?' ಎಂದು ತನಗೆ ಮೊದಲಿಂದಿದ್ದ ಸಂಶಯವನ್ನು ಹೊರಗೆಡವಿದ. ಆಕೆಗೂ ಆಸ್ಥಾನವೈದ್ಯನಿಗೂ ಇರುವ ಗುರುತರವಾದ ಹೊಣೆಯನ್ನು ವಿವರಿ ಸಿದ. ಅವರಿಬ್ಬರನ್ನೂ ಸೆರೆಮನೆಯಲ್ಲಿರಿಸ ಬೇಕಾದ ಕಾರಣಗಳನ್ನು ವಿಶದೀಕರಿಸಿದ. 'ಕೃಪಾಸಿಂಹನ ಕುಟುಂಬಗೌರವ ಉಳಿಸು ವುದು ನಮ್ಮೆಲ್ಲರ ಕರ್ತವ್ಯ' ಎಂದು ರಾಜ ನೀತಿ ಹೇಳಿದ ಆಕೆಗೆ.

ಅನೇಕ ರೀತಿಯಲ್ಲಿ ಆಕೆಯನ್ನು ತಾರೀಫು ಮಾಡುತ್ತಾ "ದಾದಿ, ಮೂಗೂ ಮುಖ



ವರಿಯದ ಆ ವೃದ್ಧಳಿಗೆ ನಮ್ಮೊಂದಿಗೆ ಸಂಬಂಧ ವಾದರೂ ಏನು? ಆಕೆ ಬಂದು ಮಗುವಿನ ಹಾಲಿನಲ್ಲಿ ವಿಷಬೆರೆಸಿದಳೆಂದರೆ ನ್ಯಾಯ ಮೂರ್ತಿಗಳು ನಂಬುತ್ತಿಲ್ಲ. ನಿಮ್ಮಿಬ್ಬರಮೇಲೆ ಗುಮಾನಿ ದೃಢವಾಗಿದೆ ಎಂದೂ, ಮರಣ ಶಿಕ್ಷೆಯನ್ನು ವಿಧಿಸಲೂಬಹುದೆಂದೂ ವದಂತಿ ಪ್ರಬಲವಾಗಿದೆ. ಈ ವಿಷಯಹೇಳಲು ಅದೇ ಕೆಲಸವಾಗಿ ಇಲ್ಲಿಗೆ ಬಂದೆ. ಈಗಲಾದರೂ ಮುಚ್ಚು ಮರೆಯಿಲ್ಲದೇ ನಿನಗೆ ತಿಳಿದಿರುವ ವಿಷಯವನ್ನು ಹೇಳಿದೆಯೋ ನಿನ್ನ ಮರಣ ಶಿಕ್ಷೆಯನ್ನು ತಪ್ಪಿಸಬಲ್ಲೆ." ಎಂದು ಅಭಯ ವಿತ್ತನು.

ಎಷ್ಟೇ ಸವಿಮಾತಿನಿಂದ ಹೇಳಿದರೂ ದಾದಿ ತುಸಮಾತ್ರವೂ ಚಲಿಸಲಿಲ್ಲ. ಆತನು ಹೇಳುವುದನ್ನೆಲ್ಲಾ ಕೇಳಿ, ಕೊನೆಗೆ ಆಗ ನಿದಾನವಾಗಿ "ಸ್ವಾಮಿ, ನನಗೆ ತಿಳಿದ ವಿಷಯ ಆಗಲೇ ಹೇಳಿಬಿಟ್ಟೆ. ಆಗೊಂದು ಮಾತು, ಈಗೊಂದು ಮಾತು ಆಡುವವಳು ನಾನಲ್ಲ. ವೃದ್ಧಳು ಬಾರದೆ ಎಲ್ಲಿಗೆಹೋಗುತ್ತಾಳೆ? ಎಂದಿಗಾದರೂ ಬಂದೇ ಬರುವಳು. ಬರಲಿ. ಬಂದಕೂಡಲೇ ಸತ್ಯಾಸತ್ಯಗಳು ತಿಳಿಯಲು ಸಾವಕಾಶ ವಾಗುವುದಿಲ್ಲ. ನನ್ನಮೇಲೆ ನಿಮಗೆಲ್ಲಾ ಅನುಮಾನವಿರುವುದರಿಂದ ಆಕೆ ಬರುವವರೆವಿಗೂ ನನ್ನನ್ನು ಇಲ್ಲಿಯೇ ಬಂಧನದಲ್ಲಿಡಿ. ನಿಮಗೂ ನನಗೂ ಇದೇ ಶ್ರೇಯಸ್ಕರವಾದ ಮಾರ್ಗ. ವೃದ್ಧಳು ಬಂದ ತರುವಾಯ ನನ್ನ ಅಪರಾಧ ರುಜುವಾತಾದರೆ ಮರಣದಂಡನೆಯೇ ಅಲ್ಲ, ಮತ್ತೆ ಯಾವ ಶಿಕ್ಷೆ ವಿಧಿಸಿದರೂ ಅನುಭವಿಸಲು ಸಿದ್ಧಳಿದ್ದೇನೆ' ಎಂದು ಹೇಳಿದಳು.

ದಾದಿ ಹೇಳಿದ ಮಾತುಗಳಲ್ಲಿ ನ್ಯಾಯ ವಿದೆ. ನಾಲ್ಕು ಜನ ಮೆಚ್ಚಿಕೊಳ್ಳುವ ಹಾಗಿದೆ. ಆದುದರಿಂದ ಮಂತ್ರಿ ಮತ್ತೇನು ಹೇಳಲೂ ಅವಕಾಶವಿಲ್ಲವಾಯಿತು. ಆತನು ಅಲ್ಲಿಂದೆದ್ದು ಮನೆಗೆ ಹೋದ.

ಆ ಮಾರನೆಯ ದಿನವೇ ಮಂತ್ರಿ ಶಕ್ತಿ ಸಿಂಹನ ಹತ್ತಿರ ಹೋಗಿ "ಪ್ರಭೂ, ಒಂದು ಸಣ್ಣ ವಿಷಯ ಬಿನ್ನವಿಸಿಕೊಳ್ಳಲು ಬಂದೆ. ನೋಡಿ, ನಿಮ್ಮ ಅಕ್ಕಂದಿರ ಮರಣಕ್ಕೆ ವೃದ್ಧಳೇ ಕಾರಣಳೆಂದು ಎಲ್ಲರ ಅಭಿಪ್ರಾಯವಾದರೂ, ಆ ಸಮಯದಲ್ಲಿ ಅನುಮಾನಕ್ಕೆ ಆಸ್ಪದಕೊಟ್ಟ



ವೈದ್ಯ ಮತ್ತು ದಾದಿಯರನ್ನು ನಿಜ ಹೊರ ಬೀಳುವವರೆವಿಗೂ ಸೆರೆಯಲ್ಲಿಡಬೇಕೆಂದು ಅವರನ್ನು ಬಂಧಿಸಿದೆವು. ಇದು ನಡೆದು ಈಗಾಗಲೇ ಆರು ವರ್ಷಗಳು ಗತಿಸಿದವು. ಆ ವೃದ್ಧಳ ಸುಳಿವು ಸಿಗಲಿಲ್ಲ. ಕೊನೆಯ ಪ್ರಯತ್ನವಾಗಿ ನಾನು ನಿನ್ನೆ ರಾತ್ರಿ ಅವರಿಬ್ಬ ರನ್ನೂ ನೋಡಿಕೊಂಡು ಬಂದೆ. ನಿಜ ನುಡಿಯದಿದ್ದರೆ ಮರಣಶಿಕ್ಷೆ ವಿಧಿಸುವರೆಂದೂ ಸಹ ಬೆದರಿಸಿದೆ. ಆದರೂ ಏನೂ ಪ್ರಯೋ ಜನವಾಗಲಿಲ್ಲ. ಅವರಿಬ್ಬರೂ ನಿರ್ದೋಷಿಗ ಳೆಂದು ನನಗೆ ಸಂಪೂರ್ಣವಾಗಿ ನಂಬಿಕೆ ಯುಂಟಾಗಿದೆ. ಆದುದರಿಂದ ನಿರಪರಾಧಿ ಗಳನ್ನು ಇನ್ನೂ ಬಂಧನದಲ್ಲಿಡುವುದು ನ್ಯಾಯ ವಾಗಿ ಕಾಣಿಸದು. ಈ ವಿಷಯದಲ್ಲಿ ಮಹಾ ಸ್ವಾಮಿಯವರ ಅಭಿಪ್ರಾಯ...." ಎಂದು ಇನ್ನೂ ಏನೋ ಹೇಳುತ್ತಿರಲು, ಶಕ್ತಿಸಿಂಹನು ನಡುವೆ ಬಾಯಿ ಹಾಕಿ "ನಾನೂ ಇದನ್ನೇ ಯೋಚಿಸುತ್ತಿದ್ದೆ. ಅಷ್ಟರಲ್ಲಿ ನೀನೇ ಬಂದೆ. ಪರಂಪರೆಗಳಿಂದ ನಮ್ಮ ಆಸ್ಥಾನದಲ್ಲಿರುವ ವನು ವೈದ್ಯ. ಪಾಪ, ಅಮಾಯಕ. ಆತನಿಂದ ದ್ರೋಹ ನಡೆಯಿತೆಂದು ನಾನು ನಂಬಲಾರೆ. ಇನ್ನು ಆ ದಾದಿ. ನನ್ನ ಸೋದರಳಿಯನನ್ನು ಹೊಟ್ಟೆಯಲ್ಲಿಟ್ಟುಕೊಂಡು ಕಾಪಾಡಿದವಳು. ಆಕೆಯನ್ನು ಮತ್ತೆ ಹೇಗೆ ಅನುಮಾನಿಸುವುದು? ಆದುದರಿಂದ ನಿಮ್ಮ ಸಲಹೆಯಂತೆ ಅವರಿಬ್ಬ ರನ್ನೂ ಈಗಲೇ ಬಿಡುಗಡೆಮಾಡಿಸೋಣ" ಎಂದ.

ಈ ಆಜ್ಞೆಯನ್ನು ತೆಗೆದುಕೊಂಡು ಮಂತ್ರಿ ನೆಟ್ಟಗೆ ದಾದಿ ಮತ್ತು ವೈದ್ಯರಿರುವಲ್ಲಿಗೆ ಹೋದ. ಅವರಿಬ್ಬರನ್ನೂ ಬಿಡುಗಡೆ ಮಾಡಿ ಸಿದ.

ದಾದಿ ಎಲ್ಲಿ ನಿಜವನ್ನು ಹೇಳಿಬಿಡುವಳೋ, ಎಲ್ಲಿ ತನ್ನ ಮನೆ ಮುರಿಯುವಳೋ ಎಂದು ಶಕ್ತಿಸಿಂಹ ಬಹಳ ದಿನದಿಂದ ಒಳಗೊಳಗೇ ಹೆದರುತ್ತಲಿದ್ದ. ಅದೃಷ್ಟವಶಾತ್ ಈಗ ಈ ರೀತಿ ಕೂಡಿಬಂದದ್ದಕ್ಕೆ ಆತನಿಗೆ ತುಂಬಾ ಸಂತೋಷವಾಯಿತು. ಇನ್ನು ಬ್ರಹ್ಮರುದ್ರಾದಿ ಗಳಿಗೂ ಸಹ ತಾನು ಮಾಡಿದ ಮೋಸ ತಿಳಿಯದೆಂದು ಮನಸ್ಸಿಗೆ ನೆಮ್ಮದಿ ತಂದು ಕೊಂಡ. ಆದರೆ ಈ ಕಪಟವಾದ ಮನ




ಸ್ಥಿಮಿತವು ಎಷ್ಟು ದಿನ ತಾನೇ ಉಳಿಯು ವುದು?

ಸಂಸಾರದಲ್ಲಿ ಆತನಿಗೆ ಕೊನೆಮೊದಲಿಲ್ಲದೆ ಕಷ್ಟಗಳುಂಟಾದವು. ಅವುಗಳನ್ನು ನಿವಾರಿಸಿ ಕೊಳ್ಳಲು ಆತನು ಪಟ್ಟಪಾಡು ಆ ದೇವರಿಗೇ ತಿಳಿಯಬೇಕು. ಕಷ್ಟದಮೇಲೆ ಕಷ್ಟ ಬರುತ್ತಿದ್ದುದರಿಂದ ಆತನ ಎದೆಗಾರಿಕೆ ಸ್ವಲ್ಪಸ್ವಲ್ಪವಾಗಿ ಸಡಿಲವಾಗುತಿತ್ತು. ಗಂಡಾಂತರಗಳು ಕಳೆದು, ಕಷ್ಟಗಳು ಕೊನೆಮುಟ್ಟಲು ಯಾರು ಯಾವ ಪರಿಹಾರಮಾರ್ಗ ಹೇಳಿದರೂ ಅದನ್ನು ಮಾಡುತ್ತಿದ್ದ.

ಕಷ್ಟಗಳಿಂದ ಕುಗ್ಗಿ ಕಂಗಾಲಾದ ಪ್ರಾಣಿ ಹೀಗೆ ಮಾಡುವುದರಲ್ಲಿ ಆಶ್ಚರ್ಯವೇನಿಲ್ಲ. ದೇವರೂ ಇಲ್ಲ, ದಿಂಡರೂ ಇಲ್ಲ ಎಂದಿದ್ದ ನಾಸ್ತಿಕನಾದ ಶಕ್ತಿಸಿಂಹನ ಮನಸ್ತತ್ವವು ಈಗ ತುಂಬಾ ಬದಲಾವಣೆ ಹೊಂದಿತು. ಒಂದಿಷ್ಟು ಗಡ್ಡ ಬೆಳೆಸಿಗೊಂಡು, ಕಾಷಾಯ ವಸ್ತ್ರಗಳನ್ನು ಧರಿಸಿ, ಕಮಂಡಲವನ್ನು ಕೈಯಲ್ಲಿ ಹಿಡಿದುಕೊಂಡಿರುವಾತನು ಕಾಣಿಸಿದರೆ ಸಾಕು, ಆತನನ್ನು ಆಶ್ರಯಿಸಿ ಮೋಕ್ಷಮಾರ್ಗವನ್ನು ತೋರುವಂತೆ ಅದೊಂದುರೀತಿ ಹುಚ್ಚು ಧೋರಣೆಯಲ್ಲಿ ಪ್ರಾರ್ಥಿಸಲು ಪ್ರಾರಂಭಿಸಿದ. ಯಾವ ಹುತ್ತದಲ್ಲಿ ಯಾವ ಹಾವಿರುವುದೋ, ಯಾವ ಮಹಾತ್ಮನಲ್ಲಿ ಯಾವ ಮಹಿಮೆಯಿರುವುದೋ ಎಂಬ ಕುರುಡು ನಂಬಿಕೆಯಿಂದ ಆತನು ದಾರಿಯಲ್ಲಿ ಹೋಗುವ ಸಾಧುಗಳೆಲ್ಲರನ್ನೂ ಕರೆದು, ಅವರಿಂದ ಜ್ಞಾನ ಮಾರ್ಗವನ್ನು ಅರಿಯುತ್ತಿದ್ದ. ತನ್ನ ಪುಣ್ಯ ಪ್ರಭಾವದಿಂದ ಎಂದಿಗಾದರೂ ಒಬ್ಬ ಮಹಾನುಭಾವನು ಬರಲಾರನೇ, ಮನಶ್ಶಾಂತಿಯನ್ನು ಕೊಡಲಾರನೇ ಎಂದು ಆತನು ಅನುಕ್ಷಣವೂ ನಿರೀಕ್ಷಿಸುತ್ತಿದ್ದ.

ಹೀಗೆ ತಹತಹಪಡುತ್ತಿದ್ದ ಶಕ್ತಿಸಿಂಹನ ಅರಮನೆಗೆ ಒಂದುದಿನ ಬೆಳಿಗ್ಗೆ ಒಬ್ಬಾನೊಬ್ಬ ಯೋಗಿಪುಂಗವನು ಬಂದ. ಕಾವಲುಗಾರರನ್ನು ಲಿಕ್ಕಮಾಡದೆ ಸರಸರನೆ ಭವನದೊಳಕ್ಕೆ ನುಗ್ಗಲು ಅನುವಾದ. ಆದರೆ ಅಲ್ಲಿದ್ದ ಕಾವಲುಗಾರರು ಅಡ್ಡಿಬಂದರು. ಆ ವೇಳೆಗೆ ಅದೃಷ್ಟವಶಾತ್ ಅಲ್ಲಿಗೆ ಶಕ್ತಿಸಿಂಹನು ಬಂದ. ಆ ಯೋಗಿಪುಂಗವನನ್ನು ತನ್ನೊಂದಿಗೆ ಅರಮನೆಗೆ



ಕರೆದುಕೊಂಡು ಹೋದ ಶಕ್ತಿಸಿಂಹ. ಆ ಯತೀಶ್ವರನ ವೇಷಭಾಷೆಗಳು ಅಸಾಧಾರಣ ವಾಗಿ ಕಂಡುಬಂದವು. ಇದುವರೆವಿಗೂ ಬಂದಿದ್ದ ಯತಿಗಳೆಲ್ಲಾ ಒಂದು ತೂಕ ವಾದರೆ ಈಗ ದರ್ಶನಕೊಟ್ಟ ಮಹಾನು ಭಾವನದೇ ಒಂದು ತೂಕ ಎಂದೆನ್ನಿಸಿತು ಶಕ್ತಿಸಿಂಹನಿಗೆ.

ಏಕೆಂದರೆ ಇದುವರೆವಿಗೆ ಬಂದುಹೋದ ಸಾಧುಗಳು ತನ್ನ ಜೀವಮಾನದಲ್ಲಿ ನಡೆದ ಸಂಘಟನೆಗಳಲ್ಲಿ ಒಂದೂ ತಪ್ಪಿಲ್ಲದೆ ಹೇಳಿರ ಲಿಲ್ಲ. ಆದರೆ ಈಗ ಬಂದಾತನು ಆಡಿದ ಮಾತುಗಳೆಲ್ಲ ಆಣಿಮುತ್ತುಗಳೇ! ಹೆಸರಿಗಾ ದರೂ ಒಂದುತಪ್ಪು ಕಾಣಿಸಲಿಲ್ಲ.

ಶಕ್ತಿಸಿಂಹನ ಚರಿತ್ರೆಯನ್ನೆಲ್ಲಾ ಒಂದು ಪುಸ್ತಕದ ಪುಟಗಳನ್ನು ತಿರುವಿಹಾಕಿದಂತೆ ಗಬಗಬನೆಂದು ಹೇಳಿಕೊಂಡುಹೋದ ಯೋಗಿ ಪುಂಗವ. ತನ್ಮಯತೆ ಹೊಂದಿದ ಶಕ್ತಿಸಿಂಹ. ಆತನ ಮನಸ್ಸಿನಲ್ಲಿದ್ದ ವಾಂಛೆಗಳೆಲ್ಲವನ್ನೂ ತಿಳಿಸಿದ ಆ ಯೋಗೀಶ್ವರ. ಕುಟುಂಬದಲ್ಲಿ ನಡೆದ ಕಷ್ಟನಷ್ಟಗಳೆಲ್ಲವನ್ನೂ ಮಣಿಪೋಣಿಸಿ ದಂತೆ ವಿವರಿಸಿದ. ತನ್ನ ಜೀವಮಾನದ ಒಂದೊಂದು ಅಂಶವನ್ನೂ ಹೇಳುತ್ತಿದ್ದರೆ ಶಕ್ತಿ ಸಿಂಹನ ಶರೀರ ಕಂಪಿಸಿತು. ಇಷ್ಟು ದಿನ ಬ್ರಹ್ಮರುದ್ರಾದಿಗಳಿಗೂ ತಿಳಿಯದೆಂದು ಭಾವಿ ಸಿದ್ದ ತನ್ನ ಗುಟ್ಟೆಲ್ಲಾ ಯತೀಶ್ವರನು ಹೇಳಿ ಬಿಡಲು ದಿಗ್ಭ್ರಮೆಗೊಂಡ ಶಕ್ತಿಸಿಂಹ.

ಈ ಯತೀಶ್ವರನು ತನ್ನ ತಪಃಫಲದಿಂದ ಪ್ರತ್ಯಕ್ಷವಾದ ದೇವರಂತೆ ಶಕ್ತಿಸಿಂಹನಿಗೆ ಕಾಣಿಸಿದ. ಯತೀಶ್ವರನ ಬಾಯಿಂದ ಬರುವ ಒಂದೊಂದು ಮಾತೂ ಒಂದೊಂದು ಮಂತ್ರ ದಂತೆ ಕಿವಿಗಿಂಪಾಗಿ ಕೇಳಿಸಿದವು.

ಮತ್ತೆ ದೇವರಮುಂದೆ ಮುಚ್ಚುಮರೆ ಏನು? "ಮಹಾತ್ಮನೇ ನಾನುಮಾಡದ ಪಾಪವಿಲ್ಲ. ರಾಜ್ಯಾಕಾಂಕ್ಷೆಯಿಂದ ನನ್ನ ಭಾವಂದಿರ ಕುಟುಂಬವನ್ನು ನಾಮರೂಪವಿಲ್ಲದೆ ನಾಶ ಮಾಡಿದ ಮಹಾಪಾತಕನು ನಾನು. ನಾನು ಮಾಡಿದ ಪಾತಕಗಳೇ ನನ್ನನ್ನು ಸುತ್ತಿ ಕೊಂಡು, ನನ್ನನ್ನು ಕಷ್ಟಪರಂಪರೆಗೆ ಗುರಿ ಮಾಡುತ್ತಿವೆ" ಎಂದು ಎಲ್ಲವಿಷಯಗಳನ್ನು ಆತನೊಂದಿಗೆ ಹೇಳಿಬಿಟ್ಟ.

“ಮಹಾತ್ಮರಿಗೆ ಅಸಾಧ್ಯವೆಂಬುದು ಯಾವುದೂ ಇಲ್ಲ. ನನಗೆ ಮೋಕ್ಷಪ್ರಾಪ್ತಿವಾಗುವಂತೆ ಅನುಗ್ರಹಿಸಿ. ಮನಶ್ಶಾಂತಿಯನ್ನು ಪ್ರಸಾದಿಸಿ” ಎಂದು ಶಕ್ತಿಸಿಂಹನು ಯತೀಶ್ವರನ ಪಾದಾಕ್ರಾಂತನಾಗಿ, ಪೂರ್ತಿ ಆತನ ವಶವಾದ.

ತನ್ನ ದುರಾಲೋಚನೆಗಳಿಗೆ, ದೌರ್ಜನ್ಯಗಳಿಗೆ ನಾಚಿಕೆಪಟ್ಟು ತಲೆಬಗ್ಗಿಸಿಕೊಂಡ ಶಕ್ತಿಸಿಂಹನನ್ನು—ಪಶ್ಚಾತ್ತಾಪದಿಂದ ಕಣ್ಣೀರು ಧಾರೆಯಾಗಿ ಸುರಿಸುತ್ತಿದ್ದ ಶಕ್ತಿಸಿಂಹನನ್ನು-ನೋಡಿ ಕನಿಕರಪಟ್ಟಂತೆ ಕರುಣಾಪೂರಿತ ದೃಷ್ಟಿಯಿಂದ ನೋಡಿದ ಯತೀಶ್ವರ. ಸ್ವಲ್ಪ ಹೊತ್ತು ಆತನು ಆಲೋಚನಾಮಗ್ನನಾದ. ತರುವಾಯ ಪಾಪಪರಿಹಾರಾರ್ಥವಾಗಿ ಆಚರಿಸಬೇಕಾದ ಕೆಲವು ಕ್ರಿಯೆಗಳನ್ನು ಸೂಚಿಸಿದ. ಈರೀತಿ ಮಾಡಿದರೆ ಒಳ್ಳೆತಾಗುವುದೆಂದು ಆಶೀರ್ವಾದ ಮಾಡಿದ.

ಅಂದು ಅಲ್ಲೇ ಇರುವಂತೆ ಶಕ್ತಿಸಿಂಹ ಯತೀಶ್ವರನನ್ನು ಬಹಳವಾಗಿ ಪ್ರಾರ್ಥಿಸಿಕೊಂಡ. ಆದರೆ ಯತೀಶ್ವರನು “ಮತ್ತೊಮ್ಮೆ ದರ್ಶನಕೊಡುತ್ತೇನೆ. ಲೋಕಹಿತಕ್ಕಾಗಿ ಸಂಚಾರಮಾಡಬೇಕಾದ ಕರ್ತವ್ಯ ನಮ್ಮದು. ಒಂದೇಸ್ಥಳದಲ್ಲಿರುವುದು ಉಚಿತವಲ್ಲ” ಎಂದು ಹೇಳಿ ಗಡ್ಡವನ್ನು ನೀವಿಕೊಳುತ್ತಾ ಆಸನದಿಂದ ಲಗುಬಗನೆ ಎದ್ದ. ಭಕ್ತಿವಿನಯಗಳಿಂದ ಶಕ್ತಿಸಿಂಹ ಆ ಮಹಾನುಭಾವನನ್ನು ಸ್ವತಃ



ಬೀಳ್ಕೊಡಲು ಅರಮನೆಯ ಹೆಬ್ಬಾಗಿಲಿನವರೆವಿಗೂ ಬಂದು, ಅಲ್ಲಿ ಆತನ ಅಪ್ಪಣೆ ಪಡೆದು ಹಿಂದಿರುಗಿದ.

ಅವಸರವಸರವಾಗಿ ಹೋಗುತ್ತಿದ್ದ ಯತೀಶ್ವರನಕಾಲಿಗೆ ಏನೋ ತಗಲಿತು. ಆತ ಎಡವಿಬಿದ್ದ. ಹಾಗೆ ಬಿದ್ದಾಗ ಆತನ ಸೊಂಟದಲ್ಲಿಟ್ಟುಕೊಂಡಿದ್ದ ಬಾಕುವೊಂದು ಕೆಳಗೆ ಬಿತ್ತು. ಅದು ಬಿದ್ದುದನ್ನು ಗ್ರಹಿಸಿದ ಯತೀಶ್ವರ. ಆದರೆ ಒಂದು ಕ್ಷಣವಾದರೂ ವಿಲಂಬ ಮಾಡದೆ, ಹಿಂದಕ್ಕೆಸಹ ತಿರುಗಿ ನೋಡದೆ, ತಟಕ್ಕನೆದ್ದು ಸರಸರನೆ ತನ್ನ ದಾರಿ ಹಿಡಿದು ಹೊರಟುಬಿಟ್ಟ.

ಕಾವಲುಗಾರನೊಬ್ಬನಿಗೆ ಕೆಳಗೆ ಬಿದ್ದ ಯತೀಶ್ವರನ ಬಾಕು ಕಾಣಿಸಿತು. ಅವನು

ಥರಥರನಡುಗುತ್ತಾ ಅದನ್ನು ತೆಗೆದುಕೊಂಡು ಹೋಗಿ ಶಕ್ತಿಸಿಂಹನಮುಂದೆ ಇಟ್ಟ. ಮತ್ತೊಬ್ಬ ಕಾವಲುಗಾರನು ಯತೀಶ್ವರನನ್ನು ಹಿಂಬಾಲಿಸಿದ.

ಯತೀಶ್ವರನ ಕೃಪೆಯಿಂದ ಇನ್ನೇನು ಸುದಿನಗಳು ಬರುವುದಲ್ಲಾ ಎಂದು ಸಂತೋಷದಲ್ಲಿದ್ದ ಶಕ್ತಿಸಿಂಹನಿಗೆ ಬಾಕು ನೋಡಿದ ಕೂಡಲೇ ಮತಿ ಚಲಿಸಿತು. ಬಾಕುವನ್ನು ಅತ್ತಿತ್ತ ತಿರುಗಿಸಿ ನೋಡಿದ. ಅದರಮೇಲೆ ಕೆತ್ತಿದ್ದ ಹೆಸರನ್ನು ನೋಡಿದ ಕೂಡಲೇ ಆತನ ಹೃದಯದಲ್ಲಿ ಅಗ್ನಿಪರ್ವತವೊಂದು ಸ್ಫೋಟವಾದಂತೆ ಆಯಿತು. ಹುಚ್ಚನಂತೆ ಕಿರಿಚಾಡಿದ. "ಕಳ್ಳ, ಕಳ್ಳ, ಭಾರಿಕಳ್ಳ, ಹಿಡಿಯಿರಿ, ಬಡಿಯಿರಿ, ಆ ಸಾಧುವನ್ನು ಹಿಡಿದುತನ್ನಿ, ಊಂ, ಹೋಗಿ" ಎಂದು ಅರಚುತ್ತಾ, ಕುಳಿತಿದ್ದ ಸ್ಥಳದಲ್ಲೇ ಮೂರ್ಛೆಹೋದ.

ರಾಜಾಜ್ಞೆಯನ್ನು ಶಿರಸಾವಹಿಸಿ ಆಸ್ಥಾನದ ಕುದುರೆ ಸವಾರರು ಪಂಚಕಲ್ಯಾಣಿಯಂತಹ ಅಶ್ವಗಳನ್ನೇರಿ ಪೌಡಾಯಿಸಿಕೊಂಡು ಹೋಗಿ ಆ ಸಾಧುವನ್ನು ಹಿಡಿಯಲು ಪ್ರಯತ್ನಿಸಿದರು. ಎಲ್ಲ ಅಗತ್ಯಗಳಿಗೂ ಸಿದ್ಧಮಾಡಿಕೊಂಡು ಬಂದಿದ್ದ ಸಾಧು. ಆದುದರಿಂದ ಬಾಕು ಕೆಳಗೆ ಜಾರಿ ಬಿದ್ದಕೂಡಲೇ ಯತೀಶ್ವರ ಪರಾರಿಯಾದ. ಆದರೂ ಶಕ್ತಿಸಿಂಹನ ಸವಾರರು ಪಣ ತೊಟ್ಟುಕೊಂಡಿದ್ದರು. ಹೇಗಾದರೂ ಆ ಸಾಧುವನ್ನು ಹಿಡಿಯಬೇಕೆಂಬ ಹಟದಿಂದ ತಮ್ಮ ಚತುರತೆಯನ್ನೆಲ್ಲಾ ವಿನಿಯೋಗಿಸಿ ಶಕ್ತಿಮೀರಿ ಕುದುರೆಗಳನ್ನು ಓಡಿಸಿದರು.

ತುಸ ದೂರದಲ್ಲಿ ಆ ಸಾಧುವಿನ ಕುದುರೆ ಎಬ್ಬಿಸುತ್ತಿದ್ದ ಧೂಳು ಸವಾರರಿಗೆ ಕಾಣಿಸಿತು. ಹೇಗಾದರೂ ಮಾಡಿ ಆ ಕುದುರೆಯನ್ನು ಸಮೀಪಿಸಬೇಕೆಂದು ದೀಕ್ಷೆವಹಿಸಿ ವಾಯುವೇಗದಲ್ಲಿ ಹೊರಟರು.

ಈ ರೀತಿಯಾಗಿ ಮುಂದೆ ಸಾಧು, ಹಿಂದೆ ಸವಾರರು ಒಬ್ಬರನ್ನೊಬ್ಬರು ಮೀರಿಸಿ ಅಶ್ವಗಳನ್ನು ನಾಗಾಲೋಟದಿಂದ ಓಡಿಸುತ್ತಿದ್ದರು.

—(ಮುಂದುವರಿಯುತ್ತೆ)






ಕಾಮಸಮುದ್ರದಲ್ಲಿ ಸುಂದರರಾಯರೆಂಬ ಡಾಕ್ಟರು ಹೊಸದಾಗಿ ಪ್ರಾಕ್ಟೀಸು ಪ್ರಾರಂಭಿಸಿದರು. ಕರಿಯ ಹಲಗೆಯಮೇಲೆ ಬಿಳಿ ಅಕ್ಷರಗಳಲ್ಲಿ ತಮ್ಮ ಹೆಸರು, ಅದರಮುಂದೆ ತಮ್ಮ ಡಿಗ್ರಿಗಳನ್ನು ಬರೆಯಿಸಿ, ಆ ಹಲಗೆಯನ್ನು ಮನೆಯ ಮುಂದೆ ಗೇಟಿಗೆ ತೂಗಹಾಕಿದರು. ಆ ದಾರಿಯಾಗಿ ಹಾದುಹೋಗುವ ಜನ ಆ ಹಲಗೆಯನ್ನೇನೋ ನೋಡುತ್ತಿದ್ದರೇ ಹೊರತು ಒಬ್ಬರಾದರೂ ಔಷಧಿಗಾಗಿ ಬರುವ ಪಾಪಕ್ಕೆ ಹೋಗಲಿಲ್ಲ!

“ನಾವು ಹಲಗೆ ಕಟ್ಟಿದ ಸಮಯ ಒಳ್ಳೆಯದಲ್ಲವೆಂದು ಕಾಣುತ್ತದೆ. ಇನ್ನು ಇಲ್ಲಿಂದ ಠಿಕಾಣಿಕಿತ್ತು ಬೇರೆ ಊರಿಗೆ ಹೋದರೆ ಚೆನ್ನ.” ಎಂದು ಆ ಡಾಕ್ಟರು ಆಲೋಚಿಸುತ್ತಿರುವಾಗ, ಒಬ್ಬಾಕೆ ಗೇಟು ಬಾಗಿಲು ತೆಗೆದುಕೊಂಡು ಆತುರದಿಂದ ಒಳಗೆ ಪ್ರವೇಶಿಸಿದಳು.

ಆಕೆಯನ್ನು ಕಂಡಕೂಡಲೇ ಡಾಕ್ಟರರ ಮುಖ ಹರ್ಷದಿಂದ ಉಬ್ಬಿತು. ಆತನು ಆಕೆಯನ್ನು ಆದರದಿಂದ ಬರಮಾಡಿಕೊಂಡು, ಕುಳಿತುಕೊಳ್ಳುವಂತೆ ಹೇಳಿ ‘ಏನಮ್ಮಾ ಏನು ಕಾಹಿಲೆ’ ಎಂದು ಕೇಳಿದ.

“ನನಗಲ್ಲಾ ಸ್ವಾಮಿ. ನಮ್ಮ ಯಜಮಾನರಿಗೆ ಹತ್ತು ದಿನದಿಂದ ಜ್ವರ. ಇಂದು ಇದ್ದಕ್ಕಿದಂತೆಯೇ ಬವಳಿ ಬಂದಿದೆ. ತಾವೊಂದುಸಾರಿ ನಮ್ಮ ಮನೆಗೆ ಬಂದು ನೋಡಿ ನನ್ನ ಕುಂಕುಮ ಭಾಗ್ಯ ಉಳಿಸಿಕೊಡಬೇಕು” ಎಂದಳಾಕೆ.

ಡಾಕ್ಟರು “ಓ, ಅಗತ್ಯವಾಗಿ. ನಾವು ಬೋರ್ಡು ಹಾಕಿರುವುದು ಅದಕ್ಕೇತಾನೇ? ನಡೆಯಿರಿ” ಎಂದು ಅವರ ಮನೆಗೆ ಹೋದ.

ಆಕೆಯ ಹೆಸರು ಕಾಂತಮ್ಮ. ಗಂಡನ ಹೆಸರು ರಾಜಣ್ಣ. ಡಾಕ್ಟರರು ರಾಜಣ್ಣನನ್ನು ಪರೀಕ್ಷಿಸಿ “ಪರವಾಗಿಲ್ಲ, ಏನೂ ಹೆದರಬೇಕಾಗಿಲ್ಲ. ಹೃದಯದ ಬಡಿತ ತುಸ ನಿದಾನವಾಗಿದೆ. ಹೊಸತರಹ ಇಂಜೆಕ್‌ಶನ್ ಬಂದಿದೆ. ಅದನ್ನು ಕೊಟ್ಟರೆ ಸುಧಾರಿಸುವುದು” ಎಂದು ಒಂದು ಚೀಟಿಯಮೇಲೆ ಆ ಔಷಧಿಯ ಹೆಸರು ಬರೆದು ಕೊಟ್ಟು “ಇದನ್ನು ಕೂಡಲೇ ತರಿಸಿ” ಎಂದ.

ಕಾಂತಮ್ಮ “ಸ್ವಾಮಿ, ನನ್ನ ಹತ್ತಿರ ಒಂದು ಕಾಸಾದರೂ ಇಲ್ಲ. ಅವರಿಗೆ ಗುಣಹೊಂದಿದ ಕೂಡಲೇ ನಿಮಗೆ ಕೊಡುವೆನು. ಆ ಔಷಧಿ ಯಾವುದೋ ತಾವೇ ದಯವಿಟ್ಟು ತರಿಸಿ ಕೊಡಿ” ಎಂದು ಪ್ರಾರ್ಥಿಸಿದಳು.

ಟಿ. ಸುಂದರಲಕ್ಷ್ಮಿ – ಜಯಪುರ



"ಗಿರಾಕಿ ಬೋಣಿಯಾಯಿತಲ್ಲ ಎಂದು ಕೊಂಡು ಸಂತೋಷಪಟ್ಟರೆ, ಕೈಯಿಂದಲೇ ಹಣ ಜಾರುವ ಹಾಗಿದೆಯಲ್ಲಾ" ಎಂದು ಕೊಂಡ ಡಾಕ್ಟರ್. 'ಔಷಧಿ ಸಹ ತಂದು ಕೊಡು ಎಂದರೆ ಹೇಗಮ್ಮಾ' ಎಂದು ಕೇಳಲಿದ್ದ. ಆದರೆ ಆಗ ಆತನಿಗೆ ಮತ್ತೊಂದು ಯೋಚನೆ ಹೊಳೆಯಿತು. "ಹೋಗಲಿ, ತೆಗೆದು ಕೊಡೋಣ. ಔಷಧಿಯ ಖರ್ಚು, ಫೀಜೂ ಸಹ ಆಮೇಲೆ ಒಟ್ಟಾಗಿ ಕೊಡ್ತಾರೆ. ಒಂದು ವೇಳೆ ಹಾಗೆ ಕೊಡಲಿಲ್ಲ, ಈ ಡಾಕ್ಟರು ಗುಣ ಪಡಿಸಿದರು ಎಂತ ಹತ್ತು ಜನರಲ್ಲಿ ಪ್ರಚಾರ ವಾದರೂ ಮಾಡ್ತಾರೆ. ಅದರಿಂದ ನಮ್ಮ ಅದೃಷ್ಟ ಖುಲಾಯಿಸಿ ಪ್ರಾಕ್ಟೀಸು ವೃದ್ಧಿ ಹೊಂದಬಹುದು" ಎಂದು ಯೋಚಿಸಿ ಹತ್ತಿರ ವಿದ್ದ ಎರಡು ರೂಪಾಯಿ ಆಕೆಗೆ ಕೊಟ್ಟ.

ಆ ಇಂಜೆಕ್ಷನಿಂದ ರಾಜಣ್ಣನಿಗೆ ಜ್ಞಾನ ಬಂತು. ಕ್ರಮೇಣ ಆತನ ಪರಿಸ್ಥಿತಿ ಸುಧಾರಿಸಹತ್ತಿತು. ಡಾಕ್ಟರು ಕಾಂತಮ್ಮನೊಂದಿಗೆ "ಅಮ್ಮಾ ಇನ್ನುಮೇಲೇನೂ ಭಯವಿಲ್ಲ. ಅವರಿಗೆ ಹೃದಯಸಂಬಂಧದ ರೋಗವಾದುದರಿಂದ ನೀವು ಆತನಿಗೆ ದುಃಖವಾರ್ತೆಯನ್ನಾಗಲೀ, ಶುಭವಾರ್ತೆಯನ್ನಾಗಲೀ ಹಠಾತ್ತನೆ ಹೇಳಬಾರದು. ಯಾಕೆಂದರೆ ಈ ಬೇನೆಯಿರುವವರಿಗೆ ಹಠಾತ್ತನೆ ಏನು ತಿಳಿದರೂ ಪ್ರಮಾದ" ಎಂದು ಎಚ್ಚರಿಸಿದ.

"ಹಾಗೇ ಆಗಲಿ ಡಾಕ್ಟ್ರೇ. ಈ ವಿಷಯದಲ್ಲಿ ಎಚ್ಚರಿಕೆ ವಹಿಸುವೆನು" ಎಂದಳಾಕೆ.

ಒಂದುವಾರ ಕಳೆಯಿತು. ಕಾಂತಮ್ಮ ಕೈಯಲೊಂದು ಟೆಲಿಗ್ರಾಂ ಹಿಡಿದುಕೊಂಡು ಡಾಕ್ಟರಮನೆಗೆ ಓಡಿಬಂದಳು. "ಡಾಕ್ಟ್ರೇ ಈ ಟೆಲಿಗ್ರಾಂನಲ್ಲಿರುವ ಶುಭಸಮಾಚಾರ ನಮ್ಮ ಯಜಮಾನರಿಗೆ ನಾನಿನ್ನೂ ಹೇಳಿಲ್ಲ. ಹೇಗೆ ಹೇಳಲೆಂದು ನಿಮ್ಮ ಸಲಹೆಗಾಗಿ ಬಂದೆ" ಎಂದು ಟೆಲಿಗ್ರಾಮನ್ನು ಡಾಕ್ಟರಿಗೆ ಕೊಟ್ಟಳು.

ಆತನು ಅದನ್ನು ಓದಿನೋಡಿ "ಏನು! ನಿಮ್ಮ ಯಜಮಾನರಿಗೆ ಲಾಟರಿಯಲ್ಲಿ ಐವತ್ತು ಸಾವಿರ ರೂಪಾಯಿ ಬಂದಿದೆ ಎಂದಿದೆ. ಎಂತಹ ಅದೃಷ್ಟವಮ್ಮ ನಿಮ್ಮದು" ಎಂದ. ಆದರೆ ಆತನ ಮನಸ್ಸಿನಲ್ಲಿ ಸ್ವಲ್ಪ ಅಸೂಯೆ ಜನಿಸಿತು. "ಕೆಲವರಿಗೆ ಹೀಗೆ ಸುಮ್ಮ ಸುಮ್ಮನೆ ಹಣ ಬಂದು ಬೀಳುತ್ತಿರುತ್ತದೆ. ನನ್ನಂತಹ

ನತದೃಷ್ಟನಿಗೆ ನ್ಯಾಯವಾದ ರುಸುಮು ಸಹ ಗಿಟ್ಟುವುದಿಲ್ಲ" ಎಂದು ಅನ್ನಿಸಿತು.

ಕಾಂತಮ್ಮ ತಮ್ಮ ಸಂಭ್ರಮದಲ್ಲಿ ಡಾಕ್ಟರ ಮನೋಭಾವನೆಗಳ ಪರಿವೆಯಿಲ್ಲದೆ "ಈ ಸಂತೋಷ ಸಮಾಚಾರವನ್ನು ನಮ್ಮ ಯಜಮಾನರಿಗೆ ಹೇಗೆ ತಿಳಿಸಬೇಕೋ ತಿಳಿಯದಾಗಿದೆ. ಹೇಳದೆಯೇ ಇದ್ದರೆ ಮನಸ್ಸಿಗೆ ಸಮಾಧಾನವಿಲ್ಲ" ಎಂದಳು.

ಆಗ ಡಾಕ್ಟರು "ನಾನು ಸಂಜೆ ಬಂದು, ನಿಮ್ಮವರೊಂದಿಗೆ ಆಮಾತು ಈಮಾತು ಆಡುತ್ತಾ ಮೆಲ್ಲನೆ ಈ ವಿಷಯ ತಿಳಿಸುವೆನು. ಅದುವರೆವಿಗೆ ನೀವು ಸುಮ್ಮನಿರಿ" ಎಂದ.

"ಹಾಗೇ ಆಗಲಿ, ಡಾಕ್ಟ್ರೇ" ಎಂದು ಹೊರಟು ಹೋದಳು ಕಾಂತಮ್ಮ.

"ಈತನದು ಎಂತಹ ಅದೃಷ್ಟ. ಬೇನೆಯಲ್ಲಿರುವಾಗ ಔಷಧಿ ಕೊಳ್ಳಲೂ ಹಣವಿಲ್ಲದಾತನು ಈಗ ಅರ್ಧಲಕ್ಷದ ಸಾಹುಕಾರನಾಗಿದ್ದಾನೆ. ಈಗಲೋ ಆಗಲೋ ಎಂದಿದ್ದ ಪ್ರಾಣವನ್ನು ಉಳಿಸಿದೆನಾದುದರಿಂದ ಎಷ್ಟು ಕೇಳಿದರೂ ಕೊಡಬಹುದು. ಐನೂರು ಕೇಳಿ ನೋಡುವೆನು" ಎಂದುಕೊಂಡು ಡಾಕ್ಟರು ಅಂದು ಸಾಯಂಕಾಲ ರಾಜಣ್ಣನ ಮನೆಗೆ ಹೊರಟ.

ಡಾಕ್ಟರು ಎಷ್ಟೋ ಹಿತವಾಗಿ ಮಾತು ಮೊದಲುಮಾಡಲು ರಾಜಣ್ಣ "ಡಾಕ್ಟ್ರೇ ನಿಮ್ಮಂತಹವರು ಸಾವಿರಕ್ಕೆ ಒಬ್ಬರು ಇರಬಹುದು. ಈ ಕಾಲದಲ್ಲಿ ಡಾಕ್ಟರುಗಳು




ಕೈಯಲ್ಲಿ ಕಾಂಚಾನವಿಟ್ಟಹೊರತು ಮಾತನಾಡುವುದಿಲ್ಲ. ಹಾಗಿರುವಲ್ಲಿ ನೀವು ಔಷಧಿ ಮೊದಲುಗೊಂಡು ಕೊಂಟುಕೊಡ್ಡು ದಿನಾ ಬಂದು ನೋಡಿಕೊಂಡು ಹೋಗುತ್ತಿರುವಿರಿ. ನಿಮ್ಮ ಋಣ ಹೇಗೆ ತೀರಿಸಬಲ್ಲೆನೋ" ಎಂದ.

ಡಾಕ್ಟರು ಬುದ್ಧಿವಂತಿಕೆಯಿಂದ "ರಾಜಣ್ಣನವರೇ, ಕಷ್ಟಗಳು ಸದಾ ಇರುತ್ತವೆಯೆ? ನಿಮಗೂ ಒಳ್ಳೆ ದಿನಗಳು ಬರುತ್ತವೆ" ಎಂದ.

"ಏನು ಬರುತ್ತದೋ, ಏನೋ" ಎಂದ ರಾಜಣ್ಣ ಉದಾಸೀನದಿಂದ.

"ಪ್ರಾಪ್ತವಿದ್ದರೆ ಹೇಗಾದರೂ ಬರುತ್ತೆ. ಲಾಟರಿಯಲ್ಲಿ ಎಷ್ಟು ಜನಕ್ಕೆ ಬಂದಿಲ್ಲ?"

"ಲಾಟರಿಯಲ್ಲೇ? ಆ ಅದೃಷ್ಟವಂತರು ಬೇರೆ ಡಾಕ್ಟರೆ. ಬೇಡಾಪ್ಪಾ ಅಂತ ಹೇಳುತ್ತಿದ್ದರೂ ಕೇಳದೆ ನಮ್ಮ ಮೇನೇಜರು

ನನ್ನಿಂದ ಒಂದು ಲಾಟರಿ ಟಿಕೇಟು ಕೊಂಡು ಕೊಳ್ಳುವಂತೆ ಮಾಡಿ ಸಂಬಳದಲ್ಲಿ ಒಂದು ರೂಪಾಯಿ ಹಿಡಿದುಕೊಂಡ ಮಹರಾಯ. ಆ ರೂಪಾಯಿಯಾದರೂ ಇದ್ದಿದ್ದರೆ ಇನ್ನಾವುದಾದರೂ ಖರ್ಚಿಗೆ ಸಹಾಯವಾಗುತಿತ್ತು" ಎಂದು ತನ್ನ ಸಂತಾಪ ಹೇಳಿಕೊಂಡ.

"ಹಾಗೆ ಹೇಳಕೂಡದು. ಹಾಳಾದ ಒಂದು ರೂಪಾಯಿ ಹೋದರೆ ಹೋಯಿತು. ಹಠಾತ್ತನೆ ನಿಮಗೆ ಒಂದು ಐವತ್ತು ಸಾವಿರ ರೂಪಾಯಿ ಬರಬಹುದು. ಹಾಗೆ ಬಂದರೆ ಆಗ ಫೀಜಿಗೆಂದು ಒಂದು ಇನ್ನೂರೂ, ಬಹುಮಾನವಾಗಿ ಮುನ್ನೂರೂ ಒಟ್ಟು ಐನೂರು ರೂಪಾಯಿ ನನಗೆ ಕೊಡಬಹುದು ಅಲ್ಲವೇ?" ಎಂದ ಡಾಕ್ಟರು.

ರಾಜಣ್ಣನಿಗೆ ಸ್ವಲ್ಪ ಉತ್ಸಾಹ ಬಂತು. "ನನಗೆ ನಿಜವಾಗಿ 50,000 ರೂಪಾಯಿ ಬಂದರೆ ನಿಮಗೆ ಕೇವಲ ಐನೂರಲ್ಲ, ಇಪ್ಪತ್ತೈದು ಸಾವಿರ ಕೊಟ್ಟೇನು. ತಮಾಷೆ ಅಂತ ತಿಳಿಯಬೇಡಿ. ಪ್ರಮಾಣ ಮಾಡಿಬೇಕಾದರೆ ಹೇಳ್ತೇನೆ" ಎಂದ.

ಐನೂರು ರೂಪಾಯಿಗೆ ತೃಪ್ತಿಪಡೆಯಲು ಯೋಚಿಸಿದ್ದ ಡಾಕ್ಟರಿಗೆ ಇಪ್ಪತ್ತೈದು ಸಾವಿರ ವೆಂದು ಕಿವಿಗೆ ಬೀಳಲು ಬೆಟ್ಟದಷ್ಟು ಸಂತೋಷವಾಯಿತು. ಸಂತೋಷಾತಿರೇಕದಿಂದ "ಇಪ್ಪತ್ತೈದು ಸಾವಿರ....ಹಾಂ. ನಿಜವಾಗಿ" ಎಂದು ಒರಲುತ್ತಾ, ಹೃದಯಸ್ಥಂಭನದಿಂದ ಕುಸಿದುಬಿದ್ದ.

ಕುಳಿತಿದ್ದ ಮನುಷ್ಯ ಕುರ್ಚಿಯಿಂದ ಜಾರಿ ಬೀಳುತ್ತಿರುವುದನ್ನು ಕಂಡು ರಾಜಣ್ಣನಿಗೆ ದಿಗ್ಭ್ರಮೆ ಹಿಡಿದಂತಾಯಿತು.

ಕಾಂತಮ್ಮ ಗೊಳೋ ಎಂದು ಅತ್ತಳು. ಆಕೆಯ ಗೋಳಾಟ ಕೇಳಿ ನೆರೆಹೊರೆಯವರು ಬಂದು ಸೇರಿದರು.

ಕಾಂತಮ್ಮ ಲಾಟರಿ ಸಮಾಚಾರ ತಿಳಿಸಿ, "ನಮ್ಮವರಿಗೆ ಸಂತೋಷ ವಾರ್ತೆಯನ್ನು ನಯವಾಗಿ ಹೇಳಬೇಕೆಂದು ಡಾಕ್ಟರು ಬಂದು ಈ ರೀತಿಯಾದರು" ಎಂದಳು.

ರಾಜಣ್ಣ "ಪಾಪ, ನನ್ನನ್ನು ಆಪತ್ತಿನಿಂದ ತಪ್ಪಿಸಹೋಗಿ ಆತನೇ ಗುರಿಯಾದ" ಎಂದು ನಿಟ್ಟುಸಿರನ್ನು ಬಿಟ್ಟ.





# ಮೂರು ಪ್ರಶ್ನೆಗಳು

**ಬ**ಹಳದಿನಗಳಹಿಂದೆ ಭುವನಗಿರಿ ಎಂಬ ರಾಜ್ಯವನ್ನು ಬಾಹುಬಲನೆಂಬ ರಾಜನು ಆಳುತ್ತಿದ್ದನು. ಆತನು ಜನ್ಮತಃ ವಂಚಕ, ಕ್ರೂರಿ. ತನ್ನ ಬ್ರಹ್ಮಾಂಡವಾದ ಸೈನ್ಯವನ್ನು ಸದಾ ಇತರರನ್ನು ವಂಚಿಸಲೋ, ಇಲ್ಲ ಪರ ರಾಜರಮೇಲೆ ದಂಡೆತ್ತಿಹೋಗಲೋ ಉಪಯೋಗಿಸುವನು.

ಬಾಹುಬಲನು ಪಾಲಿಸುತ್ತಿದ್ದುದು ಸ್ವಲ್ಪ ಭೂಭಾಗವೇ ಆದರೂ ಕವಿಗಳಿಂದ, ಪಂಡಿತರುಗಳಿಂದ ಅನೇಕ ವಿಧವಾಗಿ ಹೊಗಳಿಸಿಕೊಳ್ಳುವುದು ಆತನಿಗೊಂದು ಗೀಲಿ.

ಆ ಕಾಲದಲ್ಲಿ ಧರ್ಮಬಲನೆಂಬ ಮಹಾವಿದ್ವಾಂಸನು ಭುವನಗಿರಿ ರಾಜ್ಯದಲ್ಲಿ ಮಾತ್ರವಲ್ಲದೆ ದೇಶದೇಶಗಳಲ್ಲಿ ಖ್ಯಾತಿಪಡೆದಿದ್ದ. ಆತನು ಧನಕನಕ ವಸ್ತುವಾಹನಗಳನ್ನೂ, ಗೋ ಭೂ ದಾನಗಳನ್ನೂ ಆಶಿಸುವ ಸ್ವಾರ್ಥಪರನಲ್ಲ. ಅದರಿಂದ ಪ್ರತಿಫಲಾಪೇಕ್ಷೆಯಿಲ್ಲದೆ ಶಿಷ್ಯರಿಗೆ ವಿದ್ಯೆಕಲಿಸುತ್ತಾ, ರಾಜನ ಆಶ್ರಯ ಪಡೆಯದೆ ಬಡತನದಲ್ಲೇ ಜೀವನವನ್ನು ಸಾಗಿಸುತ್ತಿದ್ದ.

ಬಾಹುಬಲ, ಧರ್ಮಬಲನ ಕೀರ್ತಿ ಪ್ರತಿಷ್ಠೆಗಳನ್ನು ಕೇಳಿದ್ದ. ಪ್ರಜೆಗಳಿಗೆ ಆತನಲ್ಲಿದ್ದ ಭಕ್ತಿಗೌರವಗಳನ್ನು ಕಂಡು, ರಾಜನಿಗೆ ತುಂಬಾ ಅಸೂಯೆ ಉಂಟಾಯಿತು. ಹೇಗಾದರೂಸರಿ, ಧರ್ಮಬಲನನ್ನು ಪೀಡಿಸಿ, ತನ್ನ ಅಡಿಯಾಳನ್ನಾಗಿ ಮಾಡಿಕೊಳ್ಳಬೇಕೆಂದು ಯೋಚಿಸಿದ.

ಒಂದುದಿನ ಆತನನ್ನು ತುಂಬಿದ ಸಭೆಗೆ ಬರಮಾಡಿ "ನಿನ್ನನ್ನು ಕುರಿತು ಅನೇಕ ಪ್ರಮಾದಕರವಾದ ವಿಷಯಗಳನ್ನು ಕೇಳುತ್ತಿದ್ದೇವೆ" ಎಂದ ಬಾಹುಬಲ.

ಆ ಮಾತುಗಳನ್ನುಕೇಳಿ ಧರ್ಮಬಲ ಚಕಿತನಾದ. ರಾಜನು ಕಪಟಿಯೂ, ಕ್ರೂರಿಯೂ ಎಂಬ ಅಂಶ ಆತನಿಗೆ ತಿಳಿದಿದೆ. ಮಹಾಸ್ವಾಮಿ "ನನ್ನನ್ನುಕುರಿತೇ! ಆಳುವ ಮಹಾಪ್ರಭುಗಳ ರಾಜ್ಯದಲ್ಲಿ ಶಾಂತವಾಗಿ ಜೀವಿ

ತೆಲುಗಿನಿಂದ



ಸುವ ಬಡ ಪೌರ ನಾನು " ಎಂದು ಅತಿವಿನಯದಿಂದ ಹೇಳಿದ ಧರ್ಮಬಲ.

ಬಾಹುಬಲ ಈ ಉತ್ತರಕೇಳಿ ಉಗ್ರನಾದ. ಆತನ ಮುಖದಲ್ಲಿ ಕ್ರೋಧವು ತಾಂಡವವಾಡಿತು. "ನಿನ್ನ ಈ ಥಳುಕು ಬೆಳಕುಗಳೂ, ಕಪಟತನ ವಿನಯತೆ ನಮ್ಮಹತ್ತಿರ ನಡೆಯುವುದಿಲ್ಲ. ವಿದ್ಯೆಹೇಳಿಕೊಡುವ ನೆಪದಲ್ಲಿ ನೀನು ರಾಜದ್ರೋಹವನ್ನು ಬಗೆಯುತ್ತಿರುವಂತೆ ನಮಗೆ ತಿಳಿದುಬಂದಿದೆ. ಹುಷಾರ್" ಎಂದು ಬೆದರಿಸಿದ.

ರಾಜನ ಕುಪಿತನುಡಿಗಳನ್ನು ಕೇಳಿ ಕಳವಳಗೊಂಡ ಧರ್ಮಬಲ. ಯಾವ ತಪ್ಪನ್ನೂ ಮಾಡದ ತನ್ನಮೇಲೆ ಈ ರಾಜನಿಗೆ ಇಷ್ಟೊಂದು ಆಗ್ರಹ ಬರಲು ಕಾರಣ ತಿಳಿಯದೆ " ಪ್ರಭೂ, ರಾಜದ್ರೋಹ ಕಾರ್ಯಗಳಿಂದ ನನಗೇನೂ ಲಾಭವಿಲ್ಲ. ನನಗೆತಿಳಿದ ಶಾಸ್ತ್ರಗಳನ್ನು ವಿದ್ಯಾರ್ಥಿಗಳಿಗೆ ಹೇಳುತ್ತಾ ಶಾಂತವಾಗಿ ಕಾಲಯಾಪನೆ ಮಾಡುತ್ತಿರುವೆನು" ಎಂದು ವಿನಯದಿಂದ ಉತ್ತರ ಹೇಳಿದ.

ಬಾಹುಬಲನಿಗೆ ಇನ್ನಷ್ಟು ಕೋಪಬಂತು. ಬೇಕೆಂದು ತಂದುಕೊಂಡ ಕೋಪ ಬೇಕೆಂದಷ್ಟು ಪ್ರಮಾಣದಲ್ಲಿ ಬೆಳೆಯುವುದಷ್ಟೆ

" ನೀನು ಶಾಸ್ತ್ರಗಳಲ್ಲಿ ಪಂಡಿತನಾಗಿ, ರಾಜದ್ರೋಹಕ್ಕೆ ದೂರವಾಗಿದ್ದವನೇ ಆಗಿದ್ದರೆ ನಾನು ಮೂರು ಪ್ರಶ್ನೆಗಳನ್ನು ಹಾಕುವೆನು, ಅವಕ್ಕೆ ಉತ್ತರ ಹೇಳು " ಎಂದ ರಾಜ.

" ಆಗಲಿ, ಮಹಾಪ್ರಭೂ " ಎಂದ ಧರ್ಮಬಲ ತಲೆ ಬಗ್ಗಿಸಿ.

ರಾಜನು ತನ್ನ ಮೀಸೆಯಮೇಲೆ ಕೈಯಾಡಿಸುತ್ತಾ " ನಮ್ಮ ಮೂರು ಪ್ರಶ್ನೆಗಳಿಗೆ ಸರಿಯಾದ ಉತ್ತರ ಹೇಳದಿದ್ದ ಪಕ್ಷಕ್ಕೆ ನಿನ್ನ ತಲೆ ಕಡಿದು ಕೋಟೆ ಬಾಗಿಲಿಗೆ ತೂಗಹಾಕುವೆನು. ತಿಳಿಯಿತೋ? ನಮ್ಮ ಪ್ರಶ್ನೆಗಳನ್ನು ಜಾಗರೂಕತೆಯಿಂದ ಕೇಳು. ಒಂದು : ನಾನು ಈ ತಲೆಯಮೇಲಿನ ಕಿರೀಟದೊಂದಿಗೆ ಎಷ್ಟು ಬೆಲೆ ಬಾಳುವೆನು? ಒಂದು ಕಾಸಿನ ಲೆಕ್ಕವೂ ಬಿಡದೆ ಹೇಳಬೇಕು. ಎರಡು : ನಾನು ಒಂದು ಸಾರಿ ಈ ಪ್ರಪಂಚವನ್ನು ಸುತ್ತಿಬರಲು ಎಷ್ಟುಕಾಲ ಹಿಡಿಯುತ್ತದೆ? ನಿಮಿಷಗಳನ್ನೂ

ಸೇರಿಸಿ ಹೇಳಬೇಕು. ಮೂರು: ನೀನು ಈ ಪ್ರಶ್ನೆಗಳನ್ನು ಹೇಳುವಾಗ ನನ್ನ ಮನಸ್ಸಿನಲ್ಲಿ ಉದ್ಭವಿಸುತ್ತಿರುವ ಯೋಚನೆಗಳನ್ನು ಮಕ್ಕಳಿಗೂ ಸಹ ತಿಳಿಯುವಂತೆ ಹೇಳಬೇಕು."

ಈ ಪ್ರಶ್ನೆಗಳಿಗೆ ಉತ್ತರ ಹೇಳಲು ಮಾನವನಿಗೆ ಸಾಧ್ಯವಿಲ್ಲದ ಮಾತೆಂದು ಧರ್ಮಬಲನಿಗೆ ತಿಳಿದಿದೆ. ಆದರೂ ಪ್ರಯತ್ನಿಸೋಣವೆಂದು ಒಂದುವಾರ ಅವಧಿ ಕೇಳಿ ತೆಗೆದುಕೊಂಡ. ಬಾಹುಬಲ ಅದಕ್ಕೆ ಅನುಮತಿ ಕೊಟ್ಟ.

ಧರ್ಮಬಲ ತನ್ನ ಗ್ರಾಮವನ್ನು ಸೇರಿಕೊಂಡ. ಆ ಮೂರು ಪ್ರಶ್ನೆಗಳ ಉತ್ತರಕ್ಕಾಗಿ ಅನೇಕ ಪುಸ್ತಕಗಳನ್ನು ಮಗುಚಿ ಹಾಕಿದ. ಇತರ ಪಂಡಿತರನ್ನೂ ಕೇಳಿ ನೋಡಿದ. ಯಾರೂ ಹೇಳಲಾರದಾದರು.

ಅವಧಿಯ ಕೊನೆಯ ದಿನ ಧರ್ಮಬಲ ರಾಜನ ಆಸ್ಥಾನಕ್ಕೆ ಹೋಗಲು ಸಿದ್ಧನಾದ. ಶಿಷ್ಯರು ಕಣ್ಣೀರು ಸುರಿಸುತ್ತಾ ಬೀಳ್ಕೊಟ್ಟರು. ಗ್ರಾಮವನ್ನು ಬಿಟ್ಟು ತುಸ ದೂರ ಹೋಗಲು ಒಬ್ಬ ಕುರಿಕಾಯುವವನು ಆತನಿಗೆ ಎದುರಾಗಿ ನಮಸ್ಕಾರಮಾಡಿ, ಆತನ ಚಿಂತೆಗೆ ಕಾರಣವೇನೆಂದು ಕೇಳಿದ.

ಧರ್ಮಬಲ ಸಂಗತಿಸಂದರ್ಭಗಳನ್ನು ವಿವರಿಸಿದ. ಅದನ್ನು ಕೇಳಿ ಕುರಿಕಾಯುವವನು ಗಹಗಹಿಸಿ ನಕ್ಕು "ಈ ಮೂರು ಪ್ರಶ್ನೆಗಳಿಗೆ ನಾನು ಜವಾಬು ಕೊಡಬಲ್ಲೆ. ಆದರೆ ನಿಮ್ಮ




ಉಡುಪನ್ನು ನನಗೆ ಕೊಡಬೇಕು. ಮಿಕ್ಕ ಕೆಲಸ ನನ್ನಮೇಲೆ ಬಿಡಿ" ಎಂದ.

ಮೊದಲು ಧರ್ಮಬಲ ಅಂಗೀಕರಿಸಲಿಲ್ಲ. ಕುರಿಕಾಯುವವನು ಅನೇಕ ರೀತಿ ಬೇಡಿಕೊಂಡಮೇಲೆ ಆತನು ಒಪ್ಪಿಕೊಂಡ. ಕುರಿಕಾಯುವವನಿಗೂ ಧರ್ಮಬಲನಿಗೂ ಆಕಾರದಲ್ಲಿ ಅಷ್ಟೇನೂ ವ್ಯತ್ಯಾಸವಿಲ್ಲವಾದುದರಿಂದಲೂ, ಧರ್ಮಬಲನು ಕೇವಲ ಒಂದುಸಾರಿ ಮಾತ್ರ ರಾಜನ ಸಮ್ಮುಖಕ್ಕೆ ಹೋದುದರಿಂದಲೂ ಆ ಬದಲಾವಣೆ ತೃಪ್ತಿಕರವಾಗಿಯೇ ಇತ್ತು.

ಧರ್ಮಬಲನ ವೇಷದಲ್ಲಿದ್ದ ಕುರಿಕಾಯುವವನು ದರ್ಬಾರಿಗೆ ಹೋದ ಕೂಡಲೇ, ಬಾಹುಬಲನು ಕಿರುನಗೆಬೀರಿ, ಪ್ರಶ್ನೆಗಳಿಗೆ ಉತ್ತರ ಹೇಳುವಂತೆ ಅಪ್ಪಣೆಮಾಡಿದ.

ಕುರಿಕಾಯುವವನು ಗಂಟಲು ಸರಿಮಾಡಿಕೊಂಡು "ಮಹಾಪ್ರಭೂ, ತಮ್ಮ ಮೊದಲನೇ ಪ್ರಶ್ನೆಗೆ ಉತ್ತರ ಹೇಳುವೆನು, ಕೇಳಿ. ತಮ್ಮ ಬೆಲೆ ತೊಂಬತ್ತೊಂಬತ್ತು ರೂಪಾಯಿ. ಹೇಗೆಂದರೆ ನಕ್ಷತ್ರಕನು ಸತ್ಯ ಹರಿಶ್ಚಂದ್ರನನ್ನು 100 ರೂಪಾಯಿಗಳಿಗಲ್ಲವೇ ಮಾರಿದ. ಸತ್ಯ ಹರಿಶ್ಚಂದ್ರನಿಗಿಂತ ನಿಮ್ಮ ಬೆಲೆ ಒಂದೇ ಒಂದು ರೂಪಾಯಿ ಕಡಿಮೆ" ಎಂದ.

ಬಾಹುಬಲನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಸತ್ಯ ಹರಿಶ್ಚಂದ್ರನೊಂದಿಗೆ ತನ್ನನ್ನು ಹೋಲಿಸಿದುದರಿಂದ ಆತನಿಗೆ ತುಂಬಾ ತೃಪ್ತಿ ಆಯಿತು. "ಎರಡನೇ ಪ್ರಶ್ನೆಗೆ ಉತ್ತರಕೊಡು" ಎಂದ ರಾಜ.

ಪ್ರಭುಗಳು ಸೂರ್ಯೋದಯವಾದ ಕೂಡಲೇ ಎದ್ದು ಪ್ರಪಂಚ ಪರ್ಯಟನಕ್ಕೆ ಹೊರಟರೆ, ಸೂರ್ಯಾಸ್ತಮಯವಾಗಿ, ಮಾರನೆಯ ದಿನ ಸೂರ್ಯೋದಯವಾಗುವ ವೇಳೆಗೆ 24 ಗಂಟೆಗಳಾಗುವುದು" ಎಂದ ಕುರಿಕಾಯುವವ.

"ಭಳಿರೆ, ಭಾಪು" ಎಂದರು ಎಲ್ಲರೂ.

"ಮೂರನೆಯ ಪ್ರಶ್ನೆಯೋ?" ಎಂದ ಬಾಹುಬಲ ಹುಬ್ಬುಗಂಟು ಹಾಕಿ.

"ಲಾಲಿಸಿ ಮಹಾಪ್ರಭೂ, ತಮ್ಮ ಮೂರನೇ ಪ್ರಶ್ನೆಗೆ ನನ್ನ ಉತ್ತರ ಅಷ್ಟೇನು ಕಷ್ಟವಾದುದಲ್ಲ. ಈ ಉತ್ತರಗಳನ್ನು ಕೊಡುವಾತ ಧರ್ಮಬಲನಲ್ಲ. ಕುರಿಕಾಯುವವನು" ಎಂದು ಹೊದೆದುಕೊಂಡಿದ್ದ ಶಾಲುವನ್ನೂ ಕಿವಿಯ ಕುಂಡಲಗಳನ್ನೂ ಒಂದು ಕಡೆ ಹಾಕಿದ, ಕುರಿಕಾಯುವವ.

ದರ್ಬಾರೆಲ್ಲಾ ಚಕಿತವಾಯಿತು. ಬಾಹುಬಲ ನಿರ್ವಿಣ್ಣನಾದ. ಎಷ್ಟೋ ಬುದ್ಧಿವಂತಿಕೆಯಿಂದ ಹೇಳಿದ ಆ ಉತ್ತರಗಳಿಗೆ ಎಲ್ಲರೂ ತುಂಬಾ ಸಂತಸಗೊಂಡರು.

ಇಂತಹ ಅಗ್ನಿಪರೀಕ್ಷೆಯಲ್ಲಿ ಉತ್ತೀರ್ಣನಾದ ಧರ್ಮಬಲನನ್ನೂ, ಕುರಿಕಾಯುವವನನ್ನೂ ಇಷ್ಟವಿದ್ದರೂ, ಇಲ್ಲದಿದ್ದರೂ ಸತ್ಕರಿಸಲೇ ಬೇಕಾಯಿತು ರಾಜನಾದ ಬಾಹುಬಲನಿಗೆ!






ಒಂದಾನೊಂದು ಕಾಲದಲ್ಲಿ ಪಾರಸೀಕದೇಶವನ್ನು ಫಜಲ್ ಮುಹಮುದನೆಂಬ ಚಕ್ರವರ್ತಿ ಆಳಿದನು. ಅನೇಕ ಲಕ್ಷ ಮೊಹರುಗಳನ್ನು ಖರ್ಚುಮಾಡಿ ಆತನು ತಾನು ವಾಸಮಾಡುತ್ತಿದ್ದ ಅರಮನೆಯನ್ನು ಕಟ್ಟಿಸಿಕೊಂಡನು. ದೇಶ ವಿದೇಶಗಳಿಂದ ಕುಶಲಕೆಲಸಗಾರರನ್ನು ಬರಮಾಡಿಕೊಂಡು, ತಮ್ಮ ಚಾಕಚಕ್ಯತೆ, ಕುಶಲತೆಗಳನ್ನೆಲ್ಲಾ ಆ ಭವನ ನಿರ್ಮಾಣದಲ್ಲಿ ತೋರಿಸಬೇಕೆಂದೂ, ಹಾಗೆ ಮಾಡಿದಪಕ್ಷಕ್ಕೆ ಭಾರಿ ಬಹುಮಾನಗಳನ್ನು ಕೊಡುವೆನೆಂದೂ ವಾಗ್ದಾನವಿತ್ತು ಕೆಲಸಮಾಡಿಸಿದ.

ಪ್ರಪಂಚದಲ್ಲಿ ಎಲ್ಲಿದ್ದರೂ, ಕೇಳಿದಷ್ಟು ಹಣ ಕೊಟ್ಟು ಅಮೃತಶಿಲೆ, ರತ್ನ, ಪಚ್ಚೆ, ಗೋಮೇದಿಕ, ಪುಷ್ಯರಾಗ, ವಜ್ರ, ಅದೇನು ಇದೇನು ಬೆಲೆಬಾಳುವ ಎಲ್ಲವಿಧವಾದ ಕಲ್ಲುಗಳನ್ನೂ ತರಿಸಿ, ಆ ಅರಮನೆಯ ಗೋಡೆಗಳಿಗೆ, ನೆಲಕ್ಕೆ, ಮೇಲಕ್ಕೆ ಹುದುಗಿಸುವಂತೆ ಹೇಳಿದ.

ಹಣಕ್ಕೆ ತಕ್ಕಂತೆ ವೈಭವ ಅಂತ ಹೇಳಿದ ಹಾಗೆ ಆ ರಾಜಭವನವೆಲ್ಲಾ ತುಂಬಾ ರಮಣೀಯವಾಗಿ ಸಿದ್ಧವಾಯಿತು. ವಿದೇಶಗಳಿಂದ ಸಹ ಅನೇಕರು ಬಂದು ಅರಮನೆಯನ್ನು ನೋಡಿ ಮನಸಾರೆ ಹೊಗಳಿ ಹೋಗುತ್ತಿದ್ದರು. ಅವರ ಮೆಚ್ಚಿಕೆ, ಹೊಗಳಿಕೆಗಳನ್ನು ಚಕ್ರವರ್ತಿ ಕೇಳಿ, ತಾನು ಮಾಡಿದ ಘನಕಾರ್ಯಕ್ಕೆ ಸಂತೋಷದಿಂದ ಉಬ್ಬಿ ಹೋಗುತ್ತಿದ್ದನು. ಅಷ್ಟೇ ಅಲ್ಲ, ಆ ಭವನವನ್ನು ಇನ್ನಷ್ಟು ಸೊಗಸಾಗಿ ಶೃಂಗಾರಮಾಡಲು ಹಣ ಸುರಿಯುತ್ತಿದ್ದನು.

ತನ್ನ ತಾತಂದಿರು ಕೂಡಿಟ್ಟಿದ್ದ ಕೋಟಿಗಟ್ಟಲೆ ಹಣ ಖಜಾನೆಯಲ್ಲಿ ಇದ್ದುದರಿಂದ ಆ ಹಣವನ್ನೆಲ್ಲಾ ಖರ್ಚುಮಾಡಿ ಅಷ್ಟು ಅದ್ಭುತವಾದ ಭವನವನ್ನು ನಿರ್ಮಿಸಿದನೇ ಹೊರತು, ಅಂತಹ ಭವನವನ್ನು ಕಟ್ಟಿಸಲು ಬೇರೆ ಯಾವ ಚಕ್ರವರ್ತಿಗೂ ಸಾಧ್ಯವಿರಲಿಲ್ಲ.

ಆ ಭವನದಲ್ಲಿ ವಾಸಮಾಡುತ್ತಾ ಆತನು ಇಪ್ಪತ್ತು ವರ್ಷಗಳ ಪರ್ಯಂತ ಆ ದೇಶವನ್ನು ಆಳಿ, ಮರಣಹೊಂದಿದ. ಆತನು ಸಾಯುವ ಮುನ್ನ ತನ್ನ ಅನಂತರ ಸಿಂಹಾಸನಕ್ಕೆ ಬರುವ ಯುವರಾಜನಾದ ಸಿರಾಜನನ್ನು



ಕರೆದು "ಅಪ್ಪಾ, ಮಗೂ, ಈ ರಾಜಭವನ ವನ್ನು ನಾನೆಷ್ಟು ಜಾಗರೂಕತೆಯಿಂದ ನೋಡಿಕೊಳ್ಳುತ್ತಿದ್ದೆನೋ, ಅದಕ್ಕೆ ಎಷ್ಟುರೀತಿ ಅಂದಚಂದಗಳಿಂದ ಅಲಂಕಾರಮಾಡಿದೆನೋ ನಿನಗೆ ಗೊತ್ತಿಲ್ಲದ ವಿಷಯವಲ್ಲ. ಆದುದ ರಿಂದ ಈ ಭವನವನ್ನು ನಿನ್ನ ಶಕ್ತ್ಯಾನುಸಾರ ಅಭಿವೃದ್ಧಿಪಡಿಸಿ, ನನ್ನ ಅಭಿಲಾಷೆಯನ್ನು ಈಡೇರಿಸಬೇಕು" ಎಂದು ಹೇಳಿದ.

ಚಕ್ರವರ್ತಿಯಾದ ಕೂಡಲೇ ಸಿರಾಜನಿಗೆ ತಂದೆಗಿಂತಲೂ ಹೆಚ್ಚು ಕೀರ್ತಿ ಸಂಪಾದಿಸ ಬೇಕೆಂದು ಇಚ್ಛೆ ಆಯಿತು. ತಂದೆ ಕಟ್ಟಿಸಿದ ರಾಜಭವನದ ಸುತ್ತಲೂ ಉದ್ಯಾನವನ, ಕೊಳ, ಲತಾಮಂಟಪ ಮುಂತಾದುವನ್ನು ಆತನು ಕಟ್ಟಿಸಿದ. ಅವುಗಳಿಗಾಗಿ ಬಿಟ್ಟದಷ್ಟು ಹಣ ಖರ್ಚಾಯಿತು.

ತಂದೆ ಇದ್ದಾಗಲೇ ಬೊಕ್ಕಸದಲ್ಲಿದ್ದ ಹಣ ವೆಲ್ಲಾ ಖರ್ಚಾಗಿಬಿಟ್ಟಿತ್ತು. ಆದುದರಿಂದ ಸಿರಾಜನು ತಾನು ನಿರ್ಮಿಸಿದ ಕೆಲಸಕಾರ್ಯ ಗಳಿಗೆ ಬೇಕಾದ ಹಣವನ್ನು ತೆರಿಗೆಯ ರೂಪ ದಲ್ಲಿ ಪ್ರಜೆಗಳಿಂದ ವಸೂಲು ಮಾಡಿದ. ಪ್ರಜೆಗಳಿಂದ ವಸೂಲು ಮಾಡಿದ ಹಣವನ್ನು ಪ್ರಜೆಗಳ ಉಪಯೋಗಕ್ಕಾಗಿ ವ್ಯಯಮಾಡ ಬೇಕಾದುದು ನ್ಯಾಯ. ಅದುಬಿಟ್ಟು, ಈ ರೀತಿ ರಾಜಭವನದ ಸೌಂದರ್ಯವನ್ನು ಹೆಚ್ಚಿಸುವ ಸಲುವಾಗಿ ಖರ್ಚು ಮಾಡುವುದು ಅನ್ಯಾಯವೆಂದು ಪ್ರಜೆಗಳು ಗೊಣಗಾಡು ತ್ತಿದ್ದರು. ಆದರೆ ಯಾರೊಬ್ಬರೂ ತೆರಿಗೆ ಕೊಡಲು ನಿರಾಕರಿಸಲಿಲ್ಲ!

ಸಿರಾಜನು ಆ ಭವನದಲ್ಲಿ ವಾಸ ಮಾಡುತ್ತಾ, ಉದ್ಯಾನವನಗಳಲ್ಲಿ ವಿಹರಿ ಸುತ್ತಾ ಪ್ರಜೆಗಳ ಕಷ್ಟಸುಖಗಳ ಕಡೆಗೆ ಗಮನ ಕೊಡದೆ, ಅವರ ಹಣವನ್ನೆಲ್ಲಾ ಆ ಭವನಕ್ಕಾಗಿ ವೆಚ್ಚಮಾಡುತ್ತಿದ್ದು, ಇಪ್ಪತ್ತೈದು ವರ್ಷ ಆ ದೇಶವನ್ನು ಆಳಿ ತೀರಿಕೊಂಡ.

ಕೊನೆಯ ಗಳಿಗೆ ಸಮೀಪಿಸುತ್ತಿರುವಾಗ ತನ್ನ ಮಗನಾದ ಅಬ್ದುಲ್ಲಾವನ್ನು ಕರೆದು "ಮಗೂ, ಪಾರಸೀಕ ಚಕ್ರವರ್ತಿಗಳ ಖ್ಯಾತಿ ಯನ್ನು ದಶದಿಕ್ಕುಗಳಲ್ಲಿ ಹರಡುತ್ತಿರುವ ಈ ನಮ್ಮ ರಾಜಭವನವನ್ನು, ಈ ಉದ್ಯಾನವನಗ ಳನ್ನು, ಲತಾಮಂಟಪಗಳನ್ನು, ಕೊಳಗಳನ್ನು ತುಂಬಾ ಜಾಗರೂಕತೆಯಿಂದ ನೋಡಿಕೊಳ್ಳ ಬೇಕು ಕಂಡೆಯಾ? ಈವರೆವಿಗೂ ನಾವು

ಮಾಡದೆ ಉಳಿದಿರುವ ಕೆಲಸಗಳನ್ನು ಹೆಚ್ಚಿಸ ಬೇಕು." ಎಂದು ಎಚ್ಚರಿಸಿ ಕಣ್ಣುಮುಚ್ಚಿದ.

ಸಿಂಹಾಸನವನ್ನು ಏರಿದಕೂಡಲೇ ಅಬ್ದುಲ್ಲಾಗೆ ತಂದೆ ತಾತರಿಗಿಂತ ಹೆಚ್ಚು ಕೀರ್ತಿ ಸಂಪಾದಿಸಬೇಕೆಂದು ಇಚ್ಛೆಯುಂಟಾಯಿತು. ತಾತ ಕಟ್ಟಿಸಿದ ಭವನದಲ್ಲೂ, ತಂದೆ ಕಟ್ಟಿಸಿದ ಲತಾಮಂಟಪಗಳಲ್ಲೂ ಆತನಿಗೆ ಅನೇಕ ಲೋಪದೋಷಗಳು ಕಾಣಿಸಿದುದರಿಂದ ಅವುಗಳಲ್ಲಿ ಕೆಲಭಾಗಗಳನ್ನು ಕೆಡವಿಸಿ, ಮತ್ತೆ ಕಟ್ಟಿಸಲು ಪ್ರಾರಂಭಿಸಿದ. ಇದಕ್ಕಾಗಿ ಆತನು ವಿದೇಶಗಳಿಂದ ಸಮರ್ಥರಾದ ಶಿಲ್ಪಿಗಳನ್ನು ಕರೆಯಿಸಿ, ಹಳೆಯರೀತಿಯಲ್ಲಿರುವುದನ್ನೆಲ್ಲಾ ನವೀನರೀತಿ ಕಟ್ಟಬೇಕೆಂದು ಆಜ್ಞಾಪಿಸಿದ.

"ಓ ಅದಕ್ಕೇನು ಮಹಾಸ್ವಾಮಿ. ಒಂದು ನಿಮಿಷದಲ್ಲಿ ಬದಲಾಯಿಸುತ್ತೇವೆ. ಒಂದಿಪ್ಪತ್ತುಕೋಟಿ ವರಹಗಳನ್ನು ಇತ್ತ ಬಿಸಾಡಿ" ಎಂದರವರು.

ಅಬ್ದುಲ್ಲಾ ತನ್ನವಜೀರನನ್ನು ಕರೆದು "ಹಾಕಯ್ಯಾ ಯಾವುದಾದರೊಂದು ತೆರಿಗೆ. ಇಪ್ಪತ್ತುಕೋಟಿ ವರಹಗಳು ಕ್ಷಣದಲ್ಲಿ ವಸೂಲು ಆಗಬೇಕು" ಎಂದ.

"ಪ್ರಭೂ, ಕರೆಯುವ ಹಸುವೆಂದು ಸಂಜೆ ತನಕ ಕರೆದರೆ ಹಾಲು ಕೊಡುವುದೇ? ಅದಕ್ಕೆ ಬೇಸರವಾಗಿ ಒದಿಯಲು ಪ್ರಾರಂಭಿಸುವುದು. ಅದೇರೀತಿ ಪ್ರಜೆಗಳೂ ಸಹ. ಮಾತುಮಾತಿಗೆ ತೆರಿಗೆ ಕೊಡಿ ಎಂದರೆ ಅವರು



ಮಾತ್ರ ಎಲ್ಲಿಂದ ತಂದು ಕೊಡುತ್ತಾರೆ" ಎಂದ ವಜೀರ.

ಚಕ್ರವರ್ತಿಗೆ ಕೋಪ ಬಂತು. ಮಂತ್ರಿಯನ್ನು ಉರಿಗಣ್ಣಿನಿಂದ ನೋಡಿದ. ಮತ್ತೇನೂ ಮಾಡಲಾರದೆ ಮಂತ್ರಿ 'ನಾಲಿಗೆ ತೆರಿಗೆ' ಎಂಬ ತೆರಿಗೆ ಹಾಕಿ, ರಾಜ್ಯದಲ್ಲಿದ್ದ ಪ್ರಜೆಗಳಿಗೆಲ್ಲಾ ತಿಳಿಯುವಂತೆ ಡಂಗುರ ಹೊಡಿಸಿದ.

"ಚಕ್ರವರ್ತಿಯವರ ರಾಜಭವನವನ್ನು, ಉದ್ಯಾನವನಗಳನ್ನು, ಲತಾಮಂಟಪಗಳನ್ನು ನವೀನರೀತಿ ನಿರ್ಮಿಸುವುದಕ್ಕೆ ಇಪ್ಪತ್ತು ಕೋಟಿ ವರಹಗಳು ಖರ್ಚಾಗುತ್ತದೆ. ಆದುದರಿಂದ ಬಾಯಿಯಲ್ಲಿ ನಾಲಿಗೆಯಿರುವ— ಗಂಡಸರು, ಹೆಂಗಸರು, ಹಿರಿಯರು ಕಿರಿಯರು ಎಂಬ ಭೇದಭಾವವಿಲ್ಲದೆ ತಲಾ ನೂರು



"ಅಲ್ಲಾಹೋ ಅಕ್ಬರ್" ಎಂದು ಹೇಳಲು ಪ್ರಾರಂಭಿಸಿದ. ಆದರೆ ಯಾರೂ ಆತನಿಗೆ ಭಿಕ್ಷೆ ಹಾಕಲಿಲ್ಲ.

ಆತನು—ಧರ್ಮವು ಈರೀತಿ ಕ್ಷೀಣಿಸುವುದೆಂದರೇನು? ಎಲ್ಲಿಗೆ ಹೋದರೂ, ಯಾರನ್ನು ಕೇಳಿದರೂ, ಮುಂದಕ್ಕೆ ಹೋಗಿ ಎಂದು ಹೇಳುವರಲ್ಲಾ—ಎಂದು ಆಶ್ಚರ್ಯಗೊಂಡ.

"ಒಂದು ಬಿಡಿಗಾಸು ಮೊದಲುಗೊಂಡು ಹಣ ಸೇರಿಸಿ, ನಾಲಿಗೆ ತೆರಿಗೆ ಕಟ್ಟಬೇಕು, ಯಾರು ನಿನಗೆ ಹಾಕ್ತಾರೆ ಭಿಕ್ಷೆ" ಎಂದ ಒಬ್ಬಾತ ಫಕೀರನಿಗೆ.

ಅಗ ಫಕೀರನು ಆತನಿಂದ ವಿಷಯವನ್ನೆಲ್ಲಾ ಕೇಳಿ ತಿಳಿದುಕೊಂಡು "ರಾಜಭವನವನ್ನು ಉತ್ತಮಪಡಿಸಲು ಪ್ರಜೆಗಳನ್ನು ಈರೀತಿ ಪೀಡಿಸುವುದೆಂದರೇನು? ಈ ಚಕ್ರವರ್ತಿ ಕಣ್ಣು ತೆರೆಯುವಂತೆ ಮಾಡಬೇಕು" ಎಂದುಕೊಂಡ.

ಆತನು ಕೂಡಲೇ ನೆಟ್ಟಗೆ ರಾಜಭವನವನ್ನು ಪ್ರವೇಶಿಸಿದ. "ಒಳಗೆ ಹೋಗಬಹುದೇ" ಎಂದು ಯಾರನ್ನೂ ಆತ ಕೇಳಲಿಲ್ಲ. ತನ್ನ ಸ್ವಂತ ಮನೆಯೊಳಗೆ ಪ್ರವೇಶಿಸುವಂತೆ ನುಗ್ಗಿದ. ದ್ವಾರಪಾಲಕರು ಆತನ ಧೈರ್ಯಕ್ಕೆ ಬೆರಗಾಗಿ ಅಡ್ಡಿಮಾಡುವುದನ್ನು ಮರೆತುಬಿಟ್ಟರು.

ಫಕೀರನು ಒಳಗೆಹೋಗಿ ಅಲ್ಲಿ ಕಾಣಿಸಿದ ನೌಕರನೊಬ್ಬನನ್ನು ಕೂಗಿ 'ಸ್ನಾನಗೃಹಯಾವುದಪ್ಪಾ' ಎಂದು ಕೇಳಿ ತಿಳಿದುಕೊಂಡು,

ನೂರು ವರಹಗಳಂತೆ ತೆರಿಗೆ ಕೊಡತಕ್ಕದ್ದು, ಡಮ್, ಡಮ್! ಆರೀತಿ ಕೊಡದಿದ್ದ ಪಕ್ಷಕ್ಕೆ ಅವರ ನಾಲಿಗೆಗಳನ್ನು ಕತ್ತರಿಸಿ ಹಾಕಲಾಗುವುದು. ಪ್ರಜೆಗಳೆಲ್ಲಾ ಈ ವಿಷಯ ತಿಳಿಯಿರಿ, ಡಮ್, ಡಮ್" ಎಂದು ಡಂಗುರ ಸಾರಿದ.

ಈ ಸುದ್ದಿ ಕೇಳಿದಕೂಡಲೇ "ಎಲಾ, ಇವನ ಮನೆ ಹಾಳಾಗ" ಎಂದು ಪ್ರತಿಯೊಬ್ಬರೂ ಮನದೊಳಗೆ ಶಪಿಸಿದರು. ಆದರೆ ತೆರಿಗೆ ಕೊಡದಿದ್ದಪಕ್ಷಕ್ಕೆ ಎಲ್ಲಿ ನಾಲಿಗೆ ಕತ್ತರಿಸಿ ಹಾಕುವನೋ ಎಂಬ ಭಯದಿಂದ ಪ್ರತಿಯೊಬ್ಬನೂ ಹಣ ಕೂಡಿಸುವ ಪ್ರಯತ್ನದಲ್ಲಿದ್ದನು.

ಈ ರೀತಿಯಿರುವಲ್ಲಿ ಆ ಪಟ್ಟಣಕ್ಕೆ ಎಲ್ಲಿಂದಲೋ ಒಬ್ಬ ಫಕೀರನು ಬಂದ. ಆತನು ಭಿಕ್ಷಾರ್ಥವಾಗಿ ಮನೆಮನೆಗೆ ಹೋಗಿ



ಬಾದಷಹನ ಸ್ವಂತ ಸ್ನಾನಗೃಹಕ್ಕೆನುಗ್ಗಿ ಸ್ನಾನಮಾಡಿಕೊಂಡು ಹೊರಗೆ ಬಂದ. ಊಟದ ಮನೆಯಿರುವ ಸ್ಥಳವನ್ನು ಕೇಳಿ ತಿಳಿದುಕೊಂಡು, ಅಲ್ಲಿಗೆ ಹೋಗಿ ಆಸನದಲ್ಲಿ ಕುಳಿತುಕೊಂಡು 'ಬಡಿಸಪ್ಪಾ' ಎಂದು ಅಡಿಗೆ ಯವನಿಗೆ ಆಜ್ಞಾಪಿಸಿದ. ಹೇಳಿದಂತೆ ಮಾಡ ದಿದ್ದರೆ ಫಕೀರನು ಕೋಪಗೊಂಡು ಶಾಪ ಎಲ್ಲಿ ಕೊಡುವನೋ ಎಂಬ ಭಯದಿಂದ ಅವನು ಚಕ್ರವರ್ತಿಗಾಗಿ ಮಾಡಿದ್ದ ಪಂಚಭಕ್ಷ ಪರಮಾನ್ನಗಳನ್ನು ಚಿನ್ನದ ತಟ್ಟೆಯಲ್ಲಿ ಆತನಿಗೆ ಬಡಿಸಿದ.




ಫಕೀರನು ಭೋಜನ ಮುಗಿಸಿಕೊಂಡು, ಶಯನಾಗಾರವೆಲ್ಲಿರುವುದೋ ಕೇಳಿ ತಿಳಿದು ಕೊಂಡು ಅಲ್ಲಿಗೆ ಹೋಗಿ ಬಾದಷಹನು ಮಲಗುವ ಹಂಸತೂಲಿಕಾತಲ್ಪದ ಮೇಲೆ ಪವಡಿಸಿ, ಗೊರಕೆ ಹೊಡೆಯಲು ಪ್ರಾರಂಭಿಸಿದ.

ಫಕೀರನ್ಯಾವನೋ ಬಂದು ಅರಮನೆ ಯನ್ನು ಸ್ವಂತ ಮನೆಯಂತೆ ಉಪಯೋಗಿಸು ತ್ತಿರುವನೆಂದು ತಿಳಿದ ಕೂಡಲೇ ಅಬ್ದುಲ್ಲಾ ಚಕ್ರವರ್ತಿಗೆ ಆಶ್ಚರ್ಯವಾಯಿತು. 'ಯಾರಪ್ಪಾ ಈ ಮಹಾನುಭಾವ?' ಎಂದು ಒಳಗೆ ಬಂದು ನೋಡಿದ.

ಫಕೀರನು ಇನ್ನೂ ನಿದ್ರೆಮಾಡುತ್ತಿದ್ದು ದರಿಂದ, ಬಾದಷಹನಿಗೆ ಆತನನ್ನು ಎಬ್ಬಿಸಲು ಮನ ಬರಲಿಲ್ಲ. ಫಕೀರನು ಎದ್ದೇಳುವವರೆ ವಿಗೂ ಅಲ್ಲೇ ಕಾದುಕೊಂಡಿದ್ದು, ಅಬ್ದುಲ್ಲಾ ಆತನೊಂದಿಗೆ ಹೀಗೆಂದ: "ಸ್ವಾಮಿ, ಫಕೀ ರರಿಗಾಗಿಯೇ ನಾವುಕಟ್ಟಿಸಿದ ಸತ್ರಗಳು ಬೇಕಾದಷ್ಟಿದ್ದರೂ ತಾವು ಈ ಅರಮನೆಯನ್ನು ಉಪಯೋಗಿಸಿ ಕೊಳ್ಳುತ್ತಿರುವಿರಲ್ಲಾ'.

ಫಕೀರನು ಏನೂ ಅರಿಯದವನಂತೆ "ಇದೂ ಒಂದು ಸತ್ರವೆಂದು ತಿಳಿದು ನಾನು ಪ್ರವೇಶಿಸಿದೆ" ಎಂದ.

"ಸತ್ರವಲ್ಲ, ಸ್ವಾಮಿ. ನನ್ನ ತಂದೆ, ತಾತಂದಿರು ವಾಸಮಾಡಿದ ರಾಜಭವನವಿದು. ಗೊತ್ತಾಗುವುದಿಲ್ಲವೆ? ಈಗ ನಾನು ವಾಸಿಸು ತ್ತಿದ್ದೇನೆ ಇದರಲ್ಲಿ" ಎಂದ ಅಬ್ದುಲ್ಲಾ.

"ಓಹೋ, ಹಾಗೋ. ಅಂದರೆ ನಿಮ್ಮ ತಾತ ಇಲ್ಲೆಷ್ಟುಕಾಲ ವಾಸಮಾಡಿದರು?" ಎಂದು ಸಹಾನುಭೂತಿಯಿಂದ ಕೇಳಿದ ಫಕೀರ.

"ಇಪ್ಪತ್ತು ವರ್ಷ" ಎಂದು ಉತ್ತರ ವಿತ್ತ ಅಬ್ದುಲ್ಲಾ.

"ನಿಮ್ಮ ತಂದೆ?" ಮತ್ತೆ ಪ್ರಶ್ನೆ ಹಾಕಿದ ಫಕೀರ.

"ಐವತ್ತು ವರ್ಷ"

"ನೀನೆಷ್ಟು ವರ್ಷಗಳಿಂದ ಇಲ್ಲಿರುವೆ?" ಮರು ಪ್ರಶ್ನೆ.

"ನನ್ನ ವಯಸ್ಸು ಮೂವತ್ತು. ನಾನು ಹುಟ್ಟಿದಾಗಲಿಂದ ಇಲ್ಲಿಯೇ ಇದ್ದೇನೆ. ಸಾಯುವವರೆವಿಗೂ ಇಲ್ಲಿಯೇ ಇರತಕ್ಕವನು" ಎಂದ ಅಬ್ದುಲ್ಲಾ.

"ನೀನು ನೂರುವರ್ಷ ಜೀವಿಸುವೆ ಯೆಂದು ಭಾವಿಸುವ. ಅಂದರೆ ಇನ್ನೊಂದು ಎಪ್ಪತ್ತು ವರ್ಷಗಳಿಗಿಂತ ಹೆಚ್ಚುಕಾಲ ಈ ಭವನದಲ್ಲಿ ನೀನು ಇರಲಾರೆಯಷ್ಟೆ." ಎಂದು ಅದೊಂದು ರೀತಿಯಾಗಿ ನೋಡಿದ ಫಕೀರ.

ಫಕೀರ ಅದೇಕೆ ಈ ರೀತಿ ಹೇಳುತ್ತಿರುವನೋ ಅರ್ಥವಾಗದೆ 'ಸರಿ' ಎಂದ.

ಪುನಃ ಫಕೀರನು "ನಿನ್ನನಂತರ ನಿನ್ನ ಮಗ, ಅವನನಂತರ ಅವನ ಮಗ ಇಲ್ಲಿ ವಾಸಿಸಬೇಕಾದವರಲ್ಲವೇ?" ಎಂದ

ಬಾದಷಹ "ನಿಜ" ವೆಂದ.

ಫಕೀರನು ಚಂಗನೆ ಹಾಸಿಗೆಯಿಂದೆದ್ದು "ಬಾದಷಹನೇ, ನಾನು ಹೇಳಲಿಲ್ಲವೇ; ಇದು ಸತ್ರವಲ್ಲದೆ ಮತ್ತೇನು? ನಿನ್ನ ತಂದೆ ತಾತ ಸಹ ಕೆಲವೇ ಕಾಲ ಇದರಲ್ಲಿ ವಾಸಿಸಿದ್ದರಷ್ಟೆ. ನೀನೂ ಅದೇರೀತಿ ಕೆಲಕಾಲ ಇದ್ದು ಹೋಗುವವನೇ ಹೊರತು ಈ ಭವನವೇನೂ ಶಾಶ್ವತವಾಗಿ ನಿನ್ನದಲ್ಲ. ಅಲ್ಲವೇ? ಅಂದಮೇಲೆ ಈ ಸತ್ರಕ್ಕಾಗಿ ಹೆತ್ತಮಕ್ಕಳಂತಿರುವ ಪ್ರಜೆಗಳನ್ನು ಪೀಚಾಡಿಸುವುದು ಯಾಕೆ? ಈ ಪರಮ ಸತ್ಯವನ್ನು ತಿಳಿದು ಇನ್ನುಮೇಲಾದರೂ ಅವರ ಹಣವನ್ನು ಅವರ ಕ್ಷೇಮಕಾರ್ಯಗಳಿಗಾಗಿ ವಿನಿಯೋಗಿಸು.' ಎಂದು ಹಿತವಚನ ಹೇಳಿ 'ಇನ್ನು ನನಗೆ ಈ ಸತ್ರದಲ್ಲಿ ಕೆಲಸವಿಲ್ಲ'. ಎಂದು ಅಲ್ಲಿಂದ ಹೊರಟುಹೋದ.

ಅಬ್ದುಲ್ಲಾ ಬುದ್ಧಿ ತಂದುಕೊಂಡು ಕೂಡಲೇ "ನಾಲಿಗೆ ತೆರಿಗೆ" ಯನ್ನು ರದ್ದು ಮಾಡಿಸಿದ. ಅಷ್ಟೇ ಅಲ್ಲ, ಅಂದಿನಿಂದ ಪ್ರಜೆಗಳಿಂದ ಹಣವನ್ನು ಬಲವಂತವಾಗಿ ವಸೂಲು ಮಾಡಿ, ಆ ಭವನಕ್ಕಾಗಿ ವೆಚ್ಚಮಾಡುವುದನ್ನು ಬಿಟುಬಿಟ್ಟ.






ದಾಸರಹಳ್ಳಿಯಲ್ಲಿ ವೆಂಕಟಪ್ಪ ಎಂಬ ವೃದ್ಧನಿದ್ದ. ಆತನ ಹೆಂಡತಿಯು ಹೆಸರು ತುಳಸಮ್ಮ. ಆ ವೃದ್ಧ ದಂಪತಿಗಳಿಗೆ ಬಾಲಾಜಿ ಅಂತ ಒಬ್ಬ ಮೊಮ್ಮಗ.

ವೆಂಕಟಪ್ಪನಿಗೆ ಗೋದಾವರಿ ಪ್ರಾಂತ್ಯದಲ್ಲಿ ಬೆಳೆದ ಹೊಗೆಸೊಪ್ಪಿನಿಂದ ತಯಾರಾದ ನಸ್ಯವೆಂದರೆ ತುಂಬಾ ಇಷ್ಟ. ದಿನಾ ಅರ್ಧಾಣೆ ಪುಡಿ ಮೂಗಿಗೇರಿಸುತ್ತಿದ್ದ ಆತ. ಬಾಲಾಜಿ ತಂದುಕೊಡುವನು. ತಂದುಕೊಟ್ಟದ್ದಕ್ಕೆ ತಾತ ಕಾಲಾಣೆ ಇನಾಂ ಕೊಡುವನು.

ವೆಂಕಟಪ್ಪನಿಗೆ ನಸ್ಯ ಏರಿಸುವುದೂ, ಸಮಯ ದೊರೆತಾಗಲೆಲ್ಲಾ ತುಸಹೊತ್ತು ತೂಕಡಿಸುವುದೂ, ನಿದ್ದೆ ಬರದಿದ್ದಾಗ ಮೊಮ್ಮಗನೊಂದಿಗೆ ಕಥೆ ಅದೂ ಇದೂ ಹೇಳಿಕೊಂಡಿರುವುದೂ ಹೊರತು ಬೇರೇನೂ ಕೆಲಸವಿಲ್ಲ. ಮನೆಯಲ್ಲಿ ಎಲ್ಲ ಕೆಲಸಕಾರ್ಯಗಳನ್ನೂ ಸೊಸೆ ಅಣಿ ಮಾಡಿಡುತ್ತಿದ್ದುದರಿಂದ, ಆ ಮಾಡಿದ ಕೆಲಸಗಳಕಡೆ ಬೆರಳು ತೋರಿಸಿ, "ಇದು ಸರಿಯಲ್ಲ, ಅದು ಸರಿಯಲ್ಲ" ಎಂದು ಗೊಣಗುಟ್ಟುವ ಕಾರ್ಯಹೊರತು ತುಳಸಮ್ಮನಿಗೆ ಬೇರೆ ಕೆಲಸವಿಲ್ಲ.

ಹೀಗೇ ಇರಲು ಆ ಹಳ್ಳಿಯಲ್ಲಿದ್ದ ಆಂಜನೇಯ ದೇವಾಲಯದಲ್ಲಿ ದಿನಾ ಮಧ್ಯಾಹ್ನ ಯಾರೋ ಭಾಗವತರು ಪುರಾಣ ಹೇಳುವರೆಂದು ತುಳಸಮ್ಮನ ಸೊಸೆಗೆ ತಿಳಿಯಿತು. ಆಕೆ ಅತ್ತೆಹತ್ತಿರ ಬಂದು "ಅತ್ತೆ, ನಿಮಗೆ ಹೇಗಿದ್ದರೂ ಪುರಸತ್ತು ಇರುತ್ತೆ. ದಿನಾಹೋಗಿ ಪುರಾಣಾ ಕೇಳಿಕೊಂಡು ಬನ್ನಿ. ಅಡಿಗೆಕೆಲಸ ನಾನು ನೋಡಿಕೊಳ್ಳುವೆನು" ಎಂದು ಹೇಳಿದಳು. ಸ್ವಲ್ಪಹೊತ್ತಾದರೂ ಈ ಅತ್ತೆ ಕಾಟವಿಲ್ಲದೆ ನೆಮ್ಮದಿಯಾಗಿ ಕೆಲಸ ಮಾಡಿಕೊಳ್ಳಬಹುದೆಂದು ಆಕೆಯ ಉದ್ದೇಶ. ಅದರಿಂದ ಆಕೆ ಈ ಉಪಾಯ ಹೂಡಿದಳು. ತುಳಸಮ್ಮ "ಪುರಾಣ ಕೇಳಿದರೆ ಪರ್ವತದಷ್ಟು ಪುಣ್ಯ" ಎಂಬ ನಂಬಿಕೆಯಿಂದ ಹೋಗಿ ಶ್ರದ್ಧೆಯಿಂದ ಕೇಳುತ್ತಿದ್ದಳು.

ಭಾಗವತರು ಪುರಾಣ ತುಂಬಾ ಚಲೋದಾಗಿ ಹೇಳುತ್ತಿದ್ದರು. ತುಳಸಮ್ಮನಿಗೆ ಅದು ತುಂಬಾ ಹಿಡಿಸಿತು. ಮನೆಗೆ ಬಂದಕೂಡಲೇ ಸೊಸೆಯೊಂದಿಗೆ "ಎಷ್ಟುಚೆನ್ನಾಗಿ ಹೇಳಿದರೂಂತೀ, ಬಹಳ ಸೊಗಸಾಗಿ ಹೇಳಿದರು" ಎಂದು ಬಾಯಿತುಂಬಾ ಹೊಗಳುತ್ತಿದ್ದಳು.

ಪಿ. ವಿ. ರಾಮಚಂದ್ರಮೂರ್ತಿ.



ತುಳಸಮ್ಮ ಪುರಾಣ ಕೇಳುವುದರಿಂದ ಉಂಟಾಗುವ ಆನಂದವನ್ನು ವೆಂಕಟಪ್ಪನಿಗೂ ದೊರಕಿಸಬೇಕೆಂದು "ಏನೊಂದ್ರೆ, ನಿಮ ಗಿನ್ನೇನು ಕೆಲಸ? ನೀವೂ ಬನ್ನಿ ಪುರಾಣಕ್ಕೆ" ಎಂದು ಒಂದೇಸಮನೆ ಹಟಹಿಡಿಯಲು, ಆಕೆಯಕಾಟ ಸಹಿಸಲಾರದೆ 'ಸರಿ' ಎಂದ ವೆಂಕಟಪ್ಪ.

ಸೊಸೆ ಮಾಡಿಕೊಟ್ಟ ತಿಂಡಿ ಕಾಫೀ ಕುಡಿದು ವೆಂಕಟಪ್ಪ, ತುಳಸಮ್ಮ, ಮೊಮ್ಮಗ ಬಾಲಾಜಿಯೊಡನೆ ಗುಡಿ ಸೇರಿಕೊಂಡರು. ಸ್ತ್ರೀಯರು ಕುಳಿತುಕೊಳ್ಳುವ ಸ್ಥಳಕ್ಕೆ ಹೋಗಿ ತುಳಸಮ್ಮ ಕುಳಿತುಕೊಂಡಳು. ತಾತ ಮತ್ತು ಮೊಮ್ಮಗ ಗಂಡಸರು ಕೂಡುವ ಸ್ಥಳದಲ್ಲಿ ಕುಳಿತರು.

ಭಾಗವತರು ಮಧ್ಯೆ ಸ್ವಾರಸ್ಯವಾದ ಒಂದು ಕಥೆ ಹೇಳಿ ಎಲ್ಲರನ್ನೂ ನಗಿಸಿದರು. ತುಳಸಮ್ಮ ತನ್ನ ಮುದಕಪ್ಪನೂ ಕೇಳಿ ಆನಂದಿಸುತ್ತಿರಬಹುದೆಂದು ಒಂದುಸಾರಿ ಆತನು ಕುಳಿತಿದ್ದ ಕಡೆ ತನ್ನ ದೃಷ್ಟಿ ಹಾಯಿಸಿದಳು. ಆಕೆಗೆ ಕಾಣಿಸಿದುದಾದರೂ ಏನುಗೊತ್ತೆ?

ವೆಂಕಟಪ್ಪ ಪಕ್ಕದಲ್ಲಿದ್ದ ಕಂಭಕ್ಕೆ ಅತುಕೊಂಡು ಹಾಯಾಗಿ ನಿದ್ದೆ ಮಾಡುತ್ತಿದ್ದಾನೆ!

ತುಳಸಮ್ಮನ ಮನಸ್ಸಿಗೆ ಕಿರಿಕಿರಿ ಆಯಿತು. ಅವರು ಸಾಯಂಕಾಲ ಮನೆಗೆ ಹಿಂದಿರುಗುವಾಗ 'ಅದೇನು ಎಲ್ಲರ ಎದುರಿಗೆ ಆ ರೀತಿ ನಿದ್ದೆ ಮಾಡ್ತೀರಿ? ಯಾರಾದರೂ ನೋಡಿದರೆ ಏನೆಂದುಕೊಳ್ಳುವರು?' ಎಂದು ಗೊಣಗಿದಳು.

ವೆಂಕಟಪ್ಪ "ಛೆ! ಅವರು ಹೇಳುತ್ತಿದ್ದ ಶ್ಲೋಕಗಳನ್ನು ಕೇಳುತ್ತಾ ಹಾಗೇ ಜಂಪು ಹಿಡಿಯಿತು. ಸದಾ ಆ ರೀತಿ ನಿದ್ದೆ ಮಾಡುವೆನೇ? ನಾಳೆ ಎಷ್ಟು ಶ್ರದ್ಧೆಯಿಂದ ಕೇಳುವೆನೋ ನೀನೇ ನೋಡುವೆಯಂತೆ' ಎಂದು ಆಕೆಗೆ ಸಮಾಧಾನ ಹೇಳಿದ.

ಆದರೆ ಮರುದಿನ ಪುರಾಣ ಕೇಳಲು ಹೋಗಿ ಮತ್ತೆ ನಿದ್ದೆಮಾಡುತ್ತಾ ಕುಳಿತಿದ್ದ. ತುಳಸಮ್ಮ ಇದನ್ನು ಆ ದಿನವೂ ಕಂಡುಹಿಡಿದಳು.

'ಇನ್ನು ಇವರಿಗೆ ಹೇಳಿ ಲಾಭವಿಲ್ಲ. ನಾಲ್ಕು ಜನರ ನಡುವೆ ಇವರು ನಿದ್ದೆಮಾಡದೇ ಇರಲು ಏನಾದರೊಂದು ಉಪಾಯ ಹೂಡಬೇಕು." ಎಂದು ಆಕೆ ರಾತ್ರಿಯೆಲ್ಲಾ ಯೋಚಿಸಿದಳು. ಬೆಳಗಾಗುವ ವೇಳೆಗೆ ಆಕೆಗೊಂದು ಉಪಾಯ ಹೊಳೆಯಿತು.




ಮೊಮ್ಮಗನನ್ನು ರಹಸ್ಯವಾಗಿ ಕೂಗಿ "ಲೋ, ಬಾಲು, ನಿನಗೊಂದು ಕೆಲ್ಸ ಹೇಳ್ತೀನೆ ಮಾಡ್ತೀಯೇನೋ" ಎಂದಳು.

"ಏನಜ್ಜೀ?" ಎಂದ ಬಾಲಾಜಿ.

"ಏನಿಲ್ಲ. ಪುರಾಣ ಕೇಳುವಾಗ ನಮ್ಮ ತಾತನಿಗೆ ನಿದ್ರೆ ಬಂದಾಗಲೆಲ್ಲಾ ಅವರನ್ನು ಎಚ್ಚರಿಸುತ್ತಿರಬೇಕು."

"ಓ, ಹಾಗೇ ಆಗಲಿ, ಅಜ್ಜೀ. ಹಾಗೆ ಮಾಡಿದರೆ ನನಗೇನು ಕೊಡುವೆ?" ಎಂದ.

"ದಿನಾ ಕಾಲಾಣೆ ಕೊಡ್ತೇನೆ" ಎಂದಳು ಅಜ್ಜಿ.

ಯಥಾಪ್ರಕಾರ ತಾತ ಹರಿಕಥೆ ನಡೆಯುತ್ತಿರುವಾಗ ತೂಕಡಿಸಿದ. ಬಾಲಾಜಿ ತಾನು ಕೊಟ್ಟ ವಚನದಂತೆ ಆತನನ್ನು ಎಚ್ಚರಿಸಿದ. ಅಜ್ಜಿ ಇದನ್ನು ನೋಡುತ್ತಲೇ ಇದ್ದಳು. ಮೊಮ್ಮಗನ ಚಟುವಟಿಕೆಗೆ ಮೆಚ್ಚಿಕೊಂಡು ಮನೆಗೆ ಹಿಂತಿರುಗಿದ ಕೂಡಲೇ ಷರತ್ತಿನ ಪ್ರಕಾರ ಅವನ ಕೈಯಲ್ಲಿ ಮೂರುಕಾಸಿಟ್ಟಳು.

ಮಾರನೆಯ ದಿನವೂ ಸಹ ತಾತ ತೂಕಡಿಸುವುದೂ, ಬಾಲಾಜಿ ಎಚ್ಚರಗೊಳಿಸುವುದೂ ನಡೆಯಿತು. ಆ ಸಾಯಂಕಾಲವೂ ಸಹ ಆಕೆ ಮಾತಿನಂತೆ ಮೊಮ್ಮಗನ ಕೈಯಲ್ಲಿ ರಹಸ್ಯವಾಗಿ ಕಾಲಾಣೆ ಇಟ್ಟಳು.

ತನ್ನಯುಕ್ತಿ ಫಲಿಸಿದುದಕ್ಕೆ ತುಳಸಮ್ಮ ತುಂಬಾ ಸಂತೋಷಪಟ್ಟಳು.

ಮೂರನೆಯ ದಿನ ಹರಿಕಥೆ ಕೇಳುವಾಗ, ಆಕೆ ಎಂದಿನಂತೆ ಗಂಡನ ಕಡೆ ನೋಡಿದಳು. ಆತ ಹಾಯಾಗಿ ನಿದ್ದೆ ಮಾಡುತ್ತಿದ್ದಾನೆ. ಬಾಲಾಜಿ ಆತನ ಪಕ್ಕದಲ್ಲೇ ಕುಳಿತುಕೊಂಡು ಆತನನ್ನು ಎಚ್ಚರಗೊಳಿಸಲು ಪ್ರಯತ್ನಿಸದೆ ಆಕೆಯ ಕಡೆಯೇ ನೋಡುತ್ತಿದ್ದಾನೆ. ಆಕೆ ಕೋಪದಿಂದ ಕಿಡಿಕಿಡಿಯಾದಳು. ಸಾಯಂಕಾಲ ಮನೆ ಸೇರಿಕೊಂಡ ಕೂಡಲೇ ಅವನನ್ನು ಹಿತ್ತಲಿಗೆ ಎಳೆದುಕೊಂಡುಹೋಗಿ 'ಏನೋ, ಯಾಕೋ, ಇವತ್ತು ತಾತನನ್ನು ಎಬ್ಬಿಸಲಿಲ್ಲ?' ಎಂದು ಗದರಿಸಿದಳು.

"ಅಜ್ಜೀ, ತಾತನನ್ನು ಎಬ್ಬಿಸಿದರೆ ನೀನು ಕಾಲಾಣೆ ಕೊಡುವೆ? ಎಬ್ಬಿಸದೆ ಇದ್ದರೆ ತಾತ ನನಗೆ ಅರ್ಧಾಣೆ ಕೊಡುತ್ತಾನೆ. ಇದೋ ನೋಡು ಅರ್ಧಾಣೆ. ತಾತ ಅಲ್ಲೇ ಕೊಟ್ಟು ಬಿಟ್ಟ." ಎಂದು ಮಿಠಾಯಿ ಕೊಳ್ಳಲು ಹೊರಗಡೆ ಓಡಿದ.




ಹಿಂದೆ ಒಂದಾನೊಂದು ಕಾಲದಲ್ಲಿ ಮಂದ ಭಾಗ್ಯನೆಂಬ ರಾಜನು ಮಿಥಿಲಾದೇಶವನ್ನು ಆಳುತ್ತಿದ್ದನು. ಆತ ಮುಂಗೋಪಿ, ಗರ್ವಿಷ್ಠ. ಯುಕ್ತಾಯುಕ್ತತೆ, ಸಾಧ್ಯಾಸಾಧ್ಯಗಳನ್ನು ವಿಚಾರಿಸದೆ, ಯಾವ ಕ್ಷಣದಲ್ಲಿ ಏನು ತೋರಿದರೆ ಅದನ್ನು ರಾಜಾಜ್ಞೆಯೆಂದು ಪ್ರಜೆಗಳ ಮೇಲೆ ಚಲಾಯಿಸುತ್ತಿದ್ದ.

ಒಂದುದಿನ ಮಂದಭಾಗ್ಯನು ತನ್ನ ಅರಮನೆಯ ಮಹಡಿಯಮೇಲೆ ತಂಗಾಳಿಯಲ್ಲಿ ತಿರುಗಾಡುತ್ತಾ ಕೆಳಗೆ ರಾಜಬೀದಿಯಲ್ಲಿ ಓಡಾಡುತ್ತಿದ್ದ ಜನರನ್ನೂ, ಅವರು ಧರಿಸಿದ್ದ ಬಗೆಬಗೆಯ ಉಡುಪುಗಳನ್ನೂ ದಿಟ್ಟಿಸಿ ನೋಡಿದ. ಕೂಡಲೇ ಆತನಿಗೊಂದು ಆಲೋಚನೆ ಹೊಳೆಯಿತು. ಮಂತ್ರಿಗೆ ಹೇಳಿಕಳುಹಿಸಿದ. ಮಂತ್ರಿ ಬಂದಕೂಡಲೇ "ಮಂತ್ರಿವರ್ಯಾ" ಎಂದ.

"ಏನಪ್ಪಣೆ ಮಹಾಪ್ರಭೂ" ಎಂದ ಮಂತ್ರಿ.

"ಅತ್ತ ರಾಜಬೀದಿ ಕಡೆ ನೋಡು. ಪ್ರಜೆಗಳು ತಮ್ಮಿಷ್ಟ ಬಂದಂತೆ ವರ್ತಿಸುತ್ತಿದ್ದಾರೆ. ಇದು ಸಹಿಸಲಾರದ ವಿಷಯ. ತೊಡುವ ವಸ್ತ್ರಗಳಿಂದ ಹಿಡಿದು ಪ್ರತಿವಿಷಯದಲ್ಲೂ ಎಲ್ಲರೂ ಒಂದೇ ರೀತಿ ಅನುಸರಿಸಬೇಕು. ಆಹಾರ, ಆಡುವ ಭಾಷೆ, ಪೂಜಿಸುವ ದೇವರು ಎಲ್ಲಾ ಒಂದೇ ಆಗಿರಬೇಕು. ಇದು ನಮ್ಮ ಆಜ್ಞೆ ಎಂದು ಕೂಡಲೇ ರಾಜ್ಯದಲ್ಲಿ ಡಂಗುರ ಹೊಯಿಸು" ಎಂದ.

ವೇಷಭಾಷೆ, ತಿಂಡಿತೀರ್ಥ, ಭಕ್ತಿವೈರಾಗ್ಯ ಇವುಗಳ ವಿಷಯದಲ್ಲಿ ಪ್ರಜೆಗಳೆಲ್ಲರನ್ನೂ ಒಂದೇ ಅಚ್ಚಿನಲ್ಲಿ ಎರಕಹೊಯ್ದಂತೆ ಸಿದ್ಧಪಡಿಸುವುದು ಸಾಮಾನ್ಯವಾದ ಕಾರ್ಯವಲ್ಲವೆಂದು ಮಂತ್ರಿ ರಾಜನಿಗೆ ಮನವಿಮಾಡಿಕೊಂಡ. ಆದರೇನು? ಊಹೂಂ. ರಾಜಾಜ್ಞೆಗೆ ಬದಲು ಇಲ್ಲವೆಂದು ಹೇಳಿದ ಮಂದಭಾಗ್ಯ ಮಹಾರಾಜ.

ಎರಡು ಮೂರುದಿನ ಕಳೆದವು. ತಾನು ಮಂತ್ರಿಗೆ ಕೊಟ್ಟ ಆಜ್ಞೆಗಳನ್ನು ಸರಿಯಾಗಿ ಪ್ರಚಾರಮಾಡಿದನೋ ಇಲ್ಲವೋ, ಪ್ರಜೆಗಳು ಅವುಗಳಂತೆ ನಡೆಯುತ್ತಿರುವರೋ ಇಲ್ಲವೋ ಎಂದು ತಿಳಿಯುವ ಹಂಬಲವುಂಟಾಯಿತು

ತಮಿಳಿನಿಂದ.

ಮಂದಭಾಗ್ಯನಿಗೆ. ತನ್ನ ರಾಜ್ಯದಲ್ಲಿ ಪ್ರತಿಯೊಬ್ಬರೂ ಆಹಾರವಿಹಾರಗಳಿಂದ ಮೊದಲುಗೊಂಡು ಪ್ರತಿ ವಿಷಯದಲ್ಲೂ ಒಂದೇಪದ್ಧತಿಯನ್ನು ಅನುಸರಿಸುವ ಸಂಪ್ರದಾಯವನ್ನು ರೂಢಿಮಾಡಿಕೊಂಡು ಆಚರಣೆಗೆ ತಂದರೆ ತನ್ನ ಆಳ್ವಿಕೆಗೆ ಒಂದು ವಿಶಿಷ್ಟವಾದ ಸ್ಥಾನ ಲಭಿಸುವುದೆಂದು ಆತನ ನಂಬಿಕೆ.

ಒಂದುದಿನ ಮಂದಭಾಗ್ಯ ಉದ್ಯಾನವನಕ್ಕೆ ಹೋದ. ಅಲ್ಲಿ ಆತನಿಗೆ ಕಾಣಿಸಿದ ದೃಶ್ಯ ಆತನ ಮನಸ್ಸನ್ನು ಕಲಕಿತು. ದಾಸದಾಸಿಯರೆಲ್ಲರೂ ಒಂದೇವಿಧವಾದ ಉಡಿಗೆ ತೊಡಿಗೆಗಳನ್ನು ಧರಿಸಿರುವರು. ಪುರುಷರು ಯಾರು, ಸ್ತ್ರೀಯರು ಯಾರು ಎಂದು ತಿಳಿಯುವುದೇ ಕಷ್ಟವಾಯಿತು ರಾಜನಿಗೆ. ಅಲ್ಲಿಂದ ಆತ ರಾಣೀವಾಸಕ್ಕೆ ಹೋದ. ಅಲ್ಲಿಯೂ ಇದೇ ಪರಿಸ್ಥಿತಿ. ರಾಣಿ ಯಾರೋ ಗುರುತುಹಿಡಿಯಲು ಸಾಧ್ಯವಾಗಲಿಲ್ಲ. ಎಲ್ಲರೂ ಒಂದೇ ರೀತಿ ಅಲಂಕಾರ ಮಾಡಿಕೊಂಡಿದ್ದಾರೆ.

ಮಂದ್ಯಭಾಗ್ಯನಿಗೆ ಮತಿ ಹೋದಂತಾಯಿತು. ಮಂತ್ರಿಯ ಮೇಲೆ ಆಗ್ರಹವುಂಟಾಯಿತು. ನೆಟ್ಟಗೆ ದರ್ಬಾರುಮಂಟಪಕ್ಕೆ ಹೋದ. ಅಲ್ಲೂ ಅದೇ ಪರಿಸ್ಥಿತಿ ಎದುರಾಗಬೇಕೇ? ಯಾರು ಮಂತ್ರಿ, ಯಾರು ಸೇನಾಧಿಪತಿ, ಯಾರು ಸೇವಕರು ಎಂಬುದು ತಿಳಿಯುವುದೇ ತೊಂದರೆಯಾಯಿತು. ಎಲ್ಲರೂ ಒಂದೇ ರೀತಿಯ ಉಡುಪು ಧರಿಸಿದ್ದಾರೆ!

'ಮಂತ್ರಿ' ಎಂದು ಕಿರಿಚಿದ ರಾಜ.

'ಮಂತ್ರೀ' ಎಂದು ಮಂತ್ರಿಯೂ ಅರಿಚಿದ.

'ನಾನೇ ಮಂತ್ರಿ? ದುರುಳ' ಎಂದ ರಾಜ ಕೋಪದಿಂದ. ಮಂತ್ರಿ ಅದೇ ಮಾತುಗಳನ್ನು ಅಷ್ಟೇ ಕೋಪದಿಂದ ಗಿಣಿಯಂತೆ ಒಪ್ಪಿಸಿದ.

ಮಂದಭಾಗ್ಯನಿಗೆ ಆಗ ಅವಿವೇಕಕ್ಕೆ ನಾಚಿಕೆ ಪಟ್ಟ. ಮರುಮಾತನಾಡದೆ ತನ್ನ ಕೋಣೆ ಸೇರಿಕೊಂಡ. ಮಾರನೆಯದಿನ ಅವರವರ ಇಷ್ಟಬಂದ ವಸ್ತ್ರಗಳನ್ನು ಹಾಕಿಕೊಳ್ಳಬಹುದೆಂದೂ, ತಮ್ಮಿಷ್ಟಬಂದ ರೀತಿಗಳಲ್ಲಿ ಮೊದಲಿನಂತೆ ಇರಬಹುದೆಂದೂ ರಾಜಾಜ್ಞೆ ಆಯಿತು.





# ಮಂತ್ರಶಕ್ತಿ

ಭೈರವಪುರದ ಜಮೀನುದಾರರಾದ ಭೈರವೇಶ್ವರರಾಜಾರವರು ಒಂದು ದಿನ ಭಾರಿ ಔತಣವನ್ನೊಂದು ಏರ್ಪಡಿಸಿದ್ದರು. ಅದಕ್ಕೆ ಕಾರಣ ಮತ್ತೇನಿಲ್ಲ. ಅವರ ಜೂಜಿನ ಕುದುರೆಗಳಲ್ಲಿ ಒಂದಾದ 'ಮೇನಕೆ' ಒಂದು ಭಾರಿ ಪಂದ್ಯದಲ್ಲಿ ಗೆದ್ದುದೇ ಅದಕ್ಕೆ ಕಾರಣ!

ಊರಿನ ಗಣ್ಯ ವ್ಯಕ್ತಿಗಳನ್ನೆಲ್ಲಾ ರಾಜಾರವರು ಔತಣ ಕೂಟಕ್ಕೆ ಆಹ್ವಾನಿಸಿದ್ದರು. ಕುದುರೆ ಪಂದ್ಯದಲ್ಲಿ ಆಸಕ್ತಿ, ಅಭ್ಯಾಸವಿರುವವರೆಲ್ಲಾ ಔತಣಕ್ಕೆ ಬಂದಿದ್ದರು.

ವೈಭವವಾಗಿ ನಡೆಯಿತು ಈ ಮೇಜವಾನೆ. ವಿವಿಧ ಆಹಾರಪದಾರ್ಥಗಳಿಂದ, ಅನೇಕ ಬಗೆಯ ಪಾನೀಯಗಳಿಂದ ಹೊಟ್ಟೆ ತುಂಬಿಸಿ ತೇಗುತ್ತಾ ಅಲ್ಲಿ ನೆರೆದವರು ಉಲ್ಲಾಸದಿಂದ ಮಾತನಾಡುತ್ತಾ ಪದೇ ಪದೇ ಗಹಗಹಿಸಿ ನಗುತ್ತಿದ್ದರು. ಚಂದನಾದಿ ಸುಗಂಧದ್ರವ್ಯಗಳ ವಾಸನೆ ಹರಡಿತ್ತು.

ಇದ್ದಕ್ಕಿದ್ದಂತೆಯೇ ಒಂದೆಡೆ ನಡೆದ ಸಣ್ಣ ಕಲಹವು ಭಾರಿ ಗಲಭೆಯಾಗಿ ಬದಲಾಯಿಸಿತು. ರಾಜಾರವರು ತಮ್ಮ ಮೀಸೆ ತಿರುವುತ್ತಾ ಅತ್ತ ಕಡೆ ನೋಡಿದರು. ಕಣ್ಣರಳಿಸಿ ದಿವಾನರು ದೃಷ್ಟಿಬೀರಿದರು.

"ತುಂಬಾ ಪ್ರಮಾದ. ಪ್ರಾಣಕ್ಕೆ ಅಪಾಯ" ಎಂದು ಭೀಮರಾಯರು ಮೇಜಿನ ಮೇಲೆ ಬಲವಾಗಿ ಗುದ್ದುತ್ತಾ ಹೇಳುತ್ತಿದ್ದಾರೆ.

"ನಿಮ್ಮ ಮಂತ್ರ ತಂತ್ರಗಳಲ್ಲಿ ನನಗೆ ಎಳ್ಳಷ್ಟೂ ನಂಬಿಕೆಯಿಲ್ಲ" ಎಂದು ಜೀವಣ್ಣ ನಸುನಗುತ್ತಾ ನುಡಿದ. ಅವರ ಸುತ್ತ ನೆರೆದರು ಔತಣಕ್ಕೆ ಬಂದಿದ್ದ ಜನ.

ರಾಜಾರವರು ದಿವಾನರಕಡೆ ನೋಡಿದರು. ದಿವಾನರು ಬಹಳ ದಿನಗಳಿಂದ ಆಸ್ಥಾನದಲ್ಲಿದ್ದುದರಿಂದ ರಾಜರ ನೋಟದಲ್ಲಿನ ಇಂಗಿತವನ್ನು ಕ್ಷಣಮಾತ್ರದಲ್ಲಿ ಗ್ರಹಿಸಿಬಿಟ್ಟರು. ಅವರು ಭೀಮರಾಯರು ಮತ್ತು ಜೀವಣ್ಣ ಕುಳಿತಿದ್ದ ಮೇಜನ್ನು ಸಮೀಪಿಸಿದರು. ಸುತ್ತಲೂ ನೆರೆದಿದ್ದ ಜನ ವಿನಯಪೂರ್ವಕವಾಗಿ ಪಕ್ಕಕ್ಕೆ ಸರಿದು ದಾರಿಮಾಡಿಕೊಟ್ಟರು.

"ಏನದು ಜಗಳ?" ಎಂದು ಕೇಳಿದರು ದಿವಾನರು.

ಡಿ. ಕೃಷ್ಣವೇಣಿ - ಬೆಂಗಳೂರು.





"ಮಂತ್ರ ತಂತ್ರಗಳಲ್ಲಿ ಇವರಿಗೆ ನಂಬಿಕೆ ಇಲ್ಲವಂತೆ. ಎಂದು ದುರುಗುಟ್ಟುತ್ತಾ ನೋಡಿದರು ಭೀಮರಾಯರು ಜೀವಣ್ಣನ ಕಡೆ.

"ಅಷ್ಟೇನೆ?" ಎಂಬಂತೆ ದಿವಾನರು ಜೀವಣ್ಣನ ಕಡೆ ನೋಡಿದರು.

"ಊಹೂಂ. ನಾನು ನಂಬುವುದಿಲ್ಲ. ಸತ್ತರೂ ನಂಬಲಾರೆ" ಎಂದ ಜೀವಣ್ಣ.

"ನಿದರ್ಶನವನ್ನು ಕೊಟ್ಟ ಪಕ್ಷಕ್ಕೆ ನಿಮ್ಮ ಶಕ್ತಿಯನ್ನು ನಂಬಬಹುದು" ಎಂದರು ಮಂತ್ರಿ.

ಭೀಮರಾಯರು ಹೆದರಿದರು. ಕೈ ಹಿಸುಕಿಕೊಳ್ಳುತ್ತಾ "ಮಂತ್ರತಂತ್ರಗಳಲ್ಲಿ, ಗಜಕರ್ಣ, ಗೋಕರ್ಣವಿದ್ಯೆಗಳಲ್ಲಿ ದಿವಾನಜಿಯವರಿಗೆ ನಂಬಿಕೆಯಿಲ್ಲವೆಂದಾಯಿತು."

"ನನ್ನ ನಂಬಿಕೆ ಕಟ್ಟಿಕೊಂಡು ನೀವು ಮಾಡುವದೇನು? ನಂಬಿಕೆಯಿಲ್ಲದ ಜೀವಣ್ಣನನ್ನು ನಿಮ್ಮ ಮಂತ್ರಪ್ರಭಾವದಿಂದ ಒಂದು ಬೆಕ್ಕಿನಂತೆಯೋ, ಇಲ್ಲ ನಾಯಿಯಂತೆಯೋ ಬದಲಾಯಿಸಿ" ಎಂದರು ದಿವಾನರು. ಪಕ್ಕಕ್ಕೆ ತಿರುಗಿ ಜೀವಣ್ಣನನ್ನು ಉದ್ದೇಶಿಸಿ ಬಲಗಣ್ಣನ್ನು ಅದೊಂದು ರೀತಿಯಾಗಿ ಹಾರಿಸಿದರು.

"ನನಗೆ ತಿಳಿದಿರುವ ಮಂತ್ರಗಳು ಅಂತಿಂತಹವಲ್ಲ. ಅಸಲು ಅದ್ಭುತ ಮಳಯಾಳಿ ಮಂತ್ರಗಳು. ತರುವಾಯ ಏನೆಂದುಕೊಂಡರೂ...."

ಜೀವಣ್ಣನು ನಡುವೆ ಭೀಮರಾಯರ ಮಾತುಗಳಿಗೆ ಅಡ್ಡಬಂದು "ಹಾಗಾದರೆ ನನ್ನನ್ನು ನಾಯಿಯಂತೆಯೋ, ಬೆಕ್ಕಿನಂತೆಯೋ ಬದಲಾಯಿಸುವಿರಿ ಎಂದಾಯಿತು" ಎಂದ.

"ಬೆಕ್ಕು ನಾಯಿಯಂತೆ ಮಾತ್ರವಲ್ಲ. ಬೇಕಾದರೆ ಕರಡಿಯಂತೆ ಬದಲಾಯಿಸಿ ಬಿಡುತ್ತೇನೆ. ಆದರೆ ಪ್ರತಿಯೊಂದಕ್ಕೂ ಒಂದುವೇಳೆಯಿರುತ್ತೆ" ಎಂದರು ಭೀಮರಾಯರು ದಿವಾನರ ಕಡೆ ನೋಡುತ್ತಾ.

ದಿವಾನರು ಬೆರಗಾದವರಂತೆ ಕಣ್ಣುಕಣ್ಣು ಬಿಟ್ಟರು.

"ಇನ್ನು ಕತ್ತಲಾಗಲು ಅರ್ಧಗಂಟೆಮಾತ್ರ ಇದೆ. ಕತ್ತಲಾದಕೂಡಲೇ ಭೀಮರಾಯರು



ತಮ್ಮ ಮಂತ್ರಶಕ್ತಿಯಿಂದ ಜೀವಣ್ಣನನ್ನು ಕರಡಿಯಂತೆ ಬದಲಾಯಿಸುವರು. ಔತಣಕ್ಕೆ ಬಂದಿರತಕ್ಕ ಅತಿಥಿಗಳೆಲ್ಲಾ ಆವರೆವಿಗೂ ಇಲ್ಲಿಯೇ ಇದ್ದು ಈ ವಿನೋದವನ್ನು ನೋಡಿಕೊಂಡು ಹೋಗಬೇಕೆಂದು ನಮ್ಮ ಅಭಿಲಾಷೆ" ಎಂದು ಹೇಳಿ ದಿವಾನರು ರಾಜರ ಪಕ್ಕದಲ್ಲಿ ಕುಳಿತುಕೊಂಡರು. ಔತಣಕ್ಕೆ ಬಂದಿದ್ದ ಜನ ಗುಸಗುಸನೆಂದು ಮಾತನಾಡಲು ಪ್ರಾರಂಭಿಸಿದರು. ಭೀಮರಾಯರ ಶಕ್ತಿ ಸಾಮರ್ಥ್ಯಗಳನ್ನು ಕುರಿತು ವಿವಿಧ ಅಭಿಪ್ರಾಯಗಳನ್ನು ಸೂಚಿಸುತ್ತಿದ್ದರು.

ದಿವಾನರು ಜೀವಣ್ಣನನ್ನು ಪಕ್ಕಕ್ಕೆಕರೆದು ಆತನ ಕಿವಿಯಲ್ಲಿ ಏನೋ ಪಿಸುಗುಟ್ಟಿದರು. ತರುವಾಯ ಆಸ್ಥಾನದ ಮೃಗಶಾಲೆಯ ಅಧಿಕಾರಿಯಾದ ಭುಜಂಗನನ್ನು ಕರೆದು ಅವನೊಂದಿಗೆ ಏನೋ ಹೇಳಿದರು.

ಕತ್ತಲಾಗುತ್ತಿದೆ. ಭೀಮರಾಯರ ಎದುರಾಗಿ ಕುಳಿತುಕೊಂಡು ಜೀವಣ್ಣ ಏನೋ ಆಲೋಚಿಸುತ್ತಿದ್ದಾನೆ. ಭೀಮರಾಯರು ವಿವಿಧ ಭಂಗಿಯಲ್ಲಿ ತಲೆ ಆಡಿಸುತ್ತಾ, ಹುಬ್ಬುಗಂಟು ಹಾಕುತ್ತಾ ನಾನಾ ಅವಸ್ಥೆಗಳನ್ನು ಅನುಭವಿಸುತ್ತಿದ್ದಾರೆ.

ತಮ್ಮ ಗಿರಿಜಾ ಮೀಸೆಯನ್ನು ತಿರುವುತ್ತಾ ರಾಜಾರವರು ಎಲ್ಲಾ ನೋಡುತ್ತಾ ಕುಳಿತಿದ್ದಾರೆ. ದಿವಾನರು ಜೀವಣ್ಣನ ಹತ್ತಿರ ಬಂದು " ನೀವು ಭೀಮರಾಯರ ಮಂತ್ರಶಕ್ತಿಯನ್ನು ಶಂಕಿಸಿ, ಸವಾಲು ಮಾಡಿರುವುದರಿಂದ ನಿಮ್ಮ ಮಾತಿನಪ್ರಕಾರ ನಡೆದುಕೊಳ್ಳಬೇಕು. ಅದೋ, ಆ ಕೋಣೆಯೊಳಗೆ ಹೋಗಿ" ಎಂದು ಜೀವಣ್ಣನ ಪಕ್ಕದಲ್ಲಿದ್ದ ಕೋಣೆಯೊಳಕ್ಕೆ ಆತನನ್ನು ಕಳುಹಿಸಿ, ಬೀಗಹಾಕಿದರು. ಭೀಮರಾಯರು ತತ್ತರಿಸಿದರು.

ದಿವಾನರು ಆತನ ಭುಜದಮೇಲೆ ಕೈಹಾಕಿ " ಸರಿ, ಇನ್ನು ಪ್ರಾರಂಭಿಸಿ. ನಿಮ್ಮ ಶಕ್ತಿಯಲ್ಲಿ ನಂಬಿಕೆಯಿಲ್ಲದವರಿಗೆ ನಿಮ್ಮ ಮಹಿಮೆ ತೋರಿಸಿ, ತಕ್ಕ ಶಾಸ್ತಿ ಮಾಡಿ. ಜೀವಣ್ಣನನ್ನು ಕರಡಿಯಂತೆ ಮಾಡಿ" ಎಂದರು.

" ನಾನೇ....ನಾನೇ " ಎಂದು ಕಂಪಿಸಿದರು ರಾಯರು,



"ಹೌದು. ನೀವೇ. ತಕ್ಕ ಶಾಸ್ತಿ ಮಾಡಿ" ಎಂದು ಹೇಳಿ ದಿವಾನರು ಮತ್ತೆ ರಾಜಾರವರ ಪಕ್ಕದಲ್ಲಿದ್ದ ತಮ್ಮ ಆಸನವನ್ನು ಅಲಂಕರಿಸಿದರು.

ಭೀಮರಾಯರು ತಲೆ ಬಗ್ಗಿಸಿಕೊಂಡು ತಮಲ್ಲಿ ತಾವು ಏನೋ ಗೊಣಗುಟ್ಟಿದರು. ಜೀವಣ್ಣನನ್ನು ಬಂಧಿಸಿದ್ದ ಕೋಣೆಯಿಂದ ಭಾರಿ ಗದ್ದಲ ಕೇಳಿಸಿತು. ಎಲ್ಲರೊಂದಿಗೆ ಭೀಮರಾಯರೂ ಥರಥರ ನಡುಗಿದರು.

"ಭಳಿರೆ, ಭಲೆ" ಎಂದು ದಿವಾನಜಿ ಎದ್ದುನಿಂತರು. ಭುಜಂಗನನ್ನು ಕರೆದು ಬಾಗಿಲು ತೆಗೆಸಿದರು.

ಆಶ್ಚರ್ಯ! ಬಾಗಿಲುತೆಗೆದ ಕೂಡಲೇ ಆನೆಯಷ್ಟುಗಾತ್ರದ ಒಂದು ಕರಡಿ ಹಿಂಗಾಲ ಮೇಲೆ ನಿಂತುಕೊಂಡು ಕಿರಿಚಾಡುತ್ತಿರುವುದು ಎಲ್ಲರಿಗೂ ಕಾಣಿಸಿತು.

"ಭೀಮರಾಯರ ಮಂತ್ರಶಕ್ತಿ ಕುರಿತು ಈಗ ಯಾರಿಗೂ ಅನುಮಾನವಿಲ್ಲವೆಂದು ತಿಳಿಯುವೆನು. ಅನುಮಾನಪಟ್ಟ ಜೀವಣ್ಣನಿಗೆ ಮಾನವ ಸ್ವರೂಪ ಬಂದಕೂಡಲೇ ಈ ಅನುಮಾನವೆಲ್ಲಾ ದೂರವಾಗುವುದು. ಭೇಷ್! ಸಾಕು. ಇನ್ನು ಈ ಕರಡಿಯನ್ನು ಜೀವಣ್ಣನಂತೆ ಬದಲಾಯಿಸಿ ಬಿಡಿ" ಎಂದರು ದಿವಾನರು.

ಭೀಮರಾಯರು ಭಯದಿಂದ ನಡುಗುತ್ತಾ 'ಆತನನ್ನು ಕರಡಿಯಂತೆ ಬದಲಾಯಿಸಿದ್ದು ನಾನಲ್ಲ' ಎಂದರು.

ರಾಜಾರವರು ಏಟುತಿಂದವರಂತೆ ಚಟಕ್ಕನೆ ಎದ್ದು "ಈ ರಾಜ್ಯದಲ್ಲಿ ಇಂತಹವೇನೂ ಸಾಗದು. ಮಾನವರನ್ನು ಕರಡಿಯಂತೆ ಬದಲಾಯಿಸಿ ಅವುಗಳನ್ನು ಹಾಗೆಯೇ ಬಿಟ್ಟರೆ ಎಷ್ಟು ಪಾಪವೋ ಸಕಲರಿಗೂ ತಿಳಿದ ವಿಷಯ.

ಅವುಗಳಿಗೆ ಮಾನವನ ಬುದ್ಧಿವಂತಿಕೆ, ಕರಡಿಗಿರುವಷ್ಟು ಶಕ್ತಿ ಯಿರುವುದರಿಂದ ನಾವೆಲ್ಲರೂ ನಾಶವಾಗುವೆವು. ಒಂದು ಐದು ನಿಮಿಷಗಳಲ್ಲಿ ಕರಡಿಯನ್ನು ಮಾನವನಂತೆ ಬದಲಾಯಿಸದ ಪಕ್ಷಕ್ಕೆ ಭೀಮರಾವ್ ನಾಳೆ ಸೂರ್ಯೋದಯವನ್ನು ನೋಡಲಾರರು."

ಎಂದು ಗಂಭೀರವಾಗಿ ನುಡಿದು ತಮ್ಮ ಪೀಠವನ್ನು ಅಲಂಕರಿಸಿದರು.

ಐದುನಿಮಿಷಕಾಲ ನಿಶಬ್ದವಾಗಿ, ನಿಧಾನವಾಗಿ ಕಳೆಯಿತು. ರಾಜರವರು ಕೋಪದಿಂದ ಕುದಿಯುತ್ತಿದ್ದರು. ದಿವಾನರು ನೆಟ್ಟನೋಟದಿಂದ ಭೀಮರಾಯರನ್ನು ಸಮೀಪಿಸಿ, ಅವರ ಭುಜವನ್ನು ಗಟ್ಟಿಯಾಗಿ ಹಿಡಿದು "ಮತ್ತೆ ಮಾನವನಂತೆ ಬದಲಾಯಿಸಲಾರದ ಶಕ್ತಿಯಿಲ್ಲದವರು ಆತನನ್ನು ಕರಡಿಯಂತೆ ಏಕೆ ಬದಲಾಯಿಸಿದಿರಿ?" ಎಂದು ಗದರಿಸಿದರು.

ಭೀಮರಾಯರ ಮೈಯೆಲ್ಲಾ ಬೆವರಿತು. ದೈನ್ಯದಿಂದ "ಆತನನ್ನು ಕರಡಿಯಂತೆ ಬದಲಾಯಿಸಿದ್ದು ನಾನಲ್ಲ. ನನ್ನ ಹತ್ತಿರ ಅಂತಹ ಮಹತ್ತರ ಶಕ್ತಿಯಾವುದೂ ಇಲ್ಲ. ಮಂತ್ರಗಳಿಗೆ ಮಾವಿನಕಾಯಿ ಉದುರುವುದೇ? ಏನೋ ಹೊಟ್ಟೇಪಾಡಿಗಾಗಿ ಅದೂ ಇದೂ ಹೇಳಿಕೊಂಡು ಬದುಕುತ್ತಿದ್ದೇನೆ" ಎಂದು ಹೇಳಿದರು ನಿಟ್ಟುಸಿರು ಬಿಡುತ್ತಾ.

ಔತಣಕ್ಕೆ ಬಂದಿದ್ದವರಕಡೆ ತಿರುಗಿ ದಿವಾನರೆಂದರು "ಕೇಳಿದರೇನು ಭೀಮರಾಯರ ಮಾತುಗಳನ್ನು!" ಎಂದರು. "ಕೇಳಿದೆವು, ಕೇಳಿದೆವು" ಎಂದು ಎಲ್ಲರೂ ಒಟ್ಟಿಗೆ ಹೇಳಿದರು.

ಮತ್ತೆ ಭುಜಂಗನನ್ನು ಕೂಗಿ ಆ ಕೋಣೆ ಬಾಗಿಲು ಹಾಕುವಂತೆ ಹೇಳಿದರು. ಕಿರಿಚುತ್ತಿದ್ದ ಕರಡಿಯನ್ನು ಒಳಗೆ ನೂಕಿ, ಆ ಕೋಣೆಯ ಬಾಗಿಲು ಮುಚ್ಚಿ ಬೀಗಹಾಕಿದ ಭುಜಂಗ.

ನಾಲ್ಕೈದು ನಿಮಿಷ ಕೋಣೆಯಕಡೆ ತದೇಕದೃಷ್ಟಿಯಿಂದ ನೋಡಿ ತಾವೇ ಸ್ವತಃ ಬೀಗ ತೆಗೆದರು ದಿವಾನಜಿ. "ವಹವ್ವಾ, ವಹವ್ವಾ" ಎಂಬ ಉದ್ಗಾರಗಳು ಕೇಳಿಸಿದವು. ಜೀವಣ್ಣನು ಗಂಭೀರವಾಗಿ ನಿಂತುಕೊಂಡು ಎಲ್ಲರ ಕಡೆ ಪ್ರಸನ್ನದೃಷ್ಟಿಯಿಂದ ನೋಡುತ್ತಿದ್ದ. ಭೀಮರಾಯರ ಮುಖ ಮತ್ತೆ ಆ ರಾಜ್ಯದಲ್ಲಿ ಕಾಣಿಸಲಿಲ್ಲ.

ಔತಣಕ್ಕೆ ಬಂದಿದ್ದ ಜನರೆಲ್ಲಾ ದಿವಾನರ ಮಂತ್ರಶಕ್ತಿಯನ್ನು ಕುರಿತು ತುಂಬಾ ಹೊಗಳಿದರು. ಒಳಗಿನ ಮರ್ಮವರಿತಿದ್ದ ಜೀವಣ್ಣ, ಭುಜಂಗ, ರಾಜರವರು ಮಾತ್ರ ಈ ನಾಟಕ ರಸವತ್ತಾಗಿ ನಡೆದಿದ್ದಕ್ಕೆ, ದಿವಾನರ ಬುದ್ಧಿವಂತಿಕೆಗೆ ಅಭಿನಂದಿಸಿದರು.



## ಕಷ್ಟ — ಇಷ್ಟ

ಅಣ್ಣನ ಕೂಡೆ
ಶಾಲೆಗೆ ಹೋಗಲು
ನಡೆಯುವುದೆಂದರೆ ಬಲು ಕಷ್ಟ
ಅಕ್ಕನ ಕೂಡೆ
ಸಿನೀಮಾ ನೋಡಲು
ಹೋಗುವುದೆಂದರೆ ಬಲು ಇಷ್ಟ

ಅಜ್ಜಿಯ ಕೂಡೆ
ಕಥೆಯನು ಕೇಳಲು
ಕೂಡುವುದೆಂದರೆ ಬಹು ಇಷ್ಟ
ಅಜ್ಜನ ಕೂಡೆ
ಪಾಠವ ನೋದಲು
ಕೂಡುವುದೆಂದರೆ ಬಲು ಕಷ್ಟ

ಅಪ್ಪನು ತರುವ
ತುಪ್ಪದ ದೋಸೆ
ತಿನ್ನುವುದೆಂದರೆ ಬಹು ಇಷ್ಟ
ಅಮ್ಮನು ಕೊಡುವ
ಕಪ್ಪಿನ ಮದ್ದು
ಕುಡಿಯವುದೆಂದರೆ ಬಹು ಕಷ್ಟ

ಬೆಟ್ಟದಮೇಲಿನ
ಕಿತ್ತಳೆ ಹಣ್ಣನು
ಕಂಡರೆ ನನಗದು ಬಲು ಇಷ್ಟ
ಪಟ್ಟಣದಲ್ಲಿನ
ಮಾವಿನ ಹಣ್ಣನು
ಸವಿಯದೆ ಬಿಡುವುದು ಬಹು ಕಷ್ಟ

ತಿಂಗಳು ತಿಂಗಳೂ
ಚೆಲು ಚಂದಮಾಮನ
ಓದುವುದೆಂದರೆ ಬಹು ಇಷ್ಟ
ಮೇಷ್ಟರು ಹೇಳುವ
ಕಷ್ಟದ ಪಾಠವು
ಓದುವುದೆಂದರೆ ಬಲು ಕಷ್ಟ

—ವಿ. ಕೆ. ಸುಂದರ್, ಮಂಗಳೂರು.

## ನಗೆಹನಿ

ಟ್ರಾಫಿಕ್ ಪೋಲೀಸು— ಏ ಯ್ ! — ನಿಲ್ಲು. ಸೈಕಲ್ಲಿಗೆ ಲೈಟಿಲ್ಲ. ಯಾರದು ಸೈಕಲ್ಲು ?

ಸವಾರ—ಈ ಸೈಕಲ್ಲು ಸರ್ಕಲ್ ಇನ್ಸ್ಪೆಕ್ಟರದು ಕಣಯ್ಯ.

* * *

ಗುರು—ನಮ್ಮ ದೇಶದಲ್ಲಿ ಚಿನ್ನ ಎಲ್ಲಿ ಹೆಚ್ಚಾಗಿ ಸಿಕ್ಕುತ್ತದೆಯೋ, ಸಿದ್ದಾ ?

ಸಿದ್ದ—(ತಲೆಕೆರೆದು), ಹೆಂಗಸರ ಮೈ ಮೇಲೆ ತುಂಬಾ ಸಿಕ್ಕುತ್ತೆ ಸಾರ್.

—ಎ. ಯೆಂ. ಜಯ.

* * *

ಹರಿಕಥೆ ದಾಸರು— (ಹರಿಕಥೆ ಮಾಡುತ್ತಾ) ಏನ್‌ಸ್ವಾಮಿ! ಹರಿಕಥೆ ಮುಗಿಯುವುದರೊಳಗೇ ಎಲ್ಲರೂ ಎದ್ದು ಹೊರಟು ಹೋದರು. ಆದರೂ ನೀವೊಬ್ಬರು ಮಾತ್ರ ಇಲ್ಲಿ ಕೂತಿದ್ದೀರಲ್ಲ. ತುಂಬಾ ಸಂತೋಷ.

ಕುಳಿತಿದ್ದವ—ಅಲ್ಲಾ ಸ್ವಾಮಿ; ನಾನು ಹೇಗೆ ಹೋಗಲಿ? ನಿಮ್ಮ ಕಾಲ ಕೆಳಗೆ ಹಾಸಿರುವ ಜಮಖಾನ ನನ್ನದೇ ಇರುವಾಗ ಹೋಗುವುದು ತಾನೇ ಹೇಗೆ?

—ಬಿ. ಅನಂತಪದ್ಮನಾಭ.

* * *

ಒಬ್ಬ—ಅರೆ! ಮಧ್ಯಾಹ್ನ ತಾನೇ ವಾಚ್ ಕಂಪೆನಿ ಮುಂದೆ ಉರಿಬಿಸಿಲಿನಲ್ಲಿ ನಿಂತಿದ್ದೆ ನೀನು! ಇದೇನು ಆಗ್ಲೆ ಇಲ್ಲಿ ಬಂದಿದ್ದೀಯೆ?

ಕಳ್ಳ—(ಪೋಲೀಸ್‌ಠಾಣೆ ಮುಂದೆ) ಅದಕ್ಕೇ ಬುದ್ದಿ, ಅಲ್ಲಿ ತುಂಬಾ ಬಿಸಿಲೂಂತ ತಣ್ಣಗಿರಲೀಂತ ಕರಕೊಂಡ್ ಬಂದವ್ರೆ ಇಲ್ಲಿಗೆ.

—ಹೆಚ್. ವಿ. ಎಸ್. ಶರ್ಮ.




## ಬೆಂಕಿಪೆಟ್ಟಿಗೆಯಲ್ಲಿ ಬಾವುಟಗಳು

ಒಂದುಸಾರಿ ನನ್ನ ಕಿಸೆಯಿಂದ ಒಂದು ಬೆಂಕಿ ಪೆಟ್ಟಿಗೆ ತೆಗೆದೆ. ಅದರಲ್ಲಿ ರೇಷ್ಮೆಯಿಂದ ತಯಾರಾದ ಪಾಕೀಸ್ತಾನದ ಪತಾಕೆ ಇದೆ. ಇನ್ನೊಂದು ಜೋಬಿನಿಂದ ಮತ್ತೊಂದು ಪೆಟ್ಟಿಗೆತೆಗೆದೆ. ಅದರಲ್ಲಿ ರೇಷ್ಮೆಯಿಂದ ತಯಾರಾದ ಭಾರತದ ಬಾವುಟವಿದೆ. ಇದನ್ನು ಪ್ರೇಕ್ಷಕರಿಗೆ ತೋರಿಸಿ, ಯಾವಯಾವ ಪೆಟ್ಟಿಗೆಯಲ್ಲಿ ಯಾವಯಾವ ಪತಾಕೆಯಿರುವುದೋ ಜ್ಞಾಪಕವಿಟ್ಟುಕೊಳ್ಳುವಂತೆ ಹೇಳಿದೆ. ನನ್ನ ಮಂತ್ರಗೋಲನ್ನು ಎರಡು ಪೆಟ್ಟಿಗೆಗಳಿಗೂ ಒಂದೊಂದುಸಾರಿ ತಾಕಿಸಿದೆ. ಆಶ್ಚರ್ಯವೇನೆಂದರೆ ಪಾಕೀಸ್ತಾನ್ ಪತಾಕೆಯಿದ್ದ ಪೆಟ್ಟಿಗೆಯಲ್ಲಿ ನಮ್ಮ ದೇಶದ ಬಾವುಟವೂ, ಭಾರತದ ಬಾವುಟವಿದ್ದ ಪೆಟ್ಟಿಗೆಯಲ್ಲಿ ಪಾಕೀಸ್ತಾನದ ಪತಾಕೆಯೂ ಬದಲಾಗಿಬಿಟ್ಟಿದೆ.

ಆಗ ನಾನು 'ನಾವೆಲ್ಲರೂ ಸಹೋದರರು. ನಮ್ಮ ನಮ್ಮಲ್ಲಿ ವಿರೋಧಗಳಿರಬಾರದು. ಎಲ್ಲರೂ ಒಂದೇ. ಇದೋ ನೋಡಿ' ಎಂದು ಆ ಪೆಟ್ಟಿಗೆಗಳನ್ನು ಅವರಿಗೆ ತೋರಿಸಿ, ಮತ್ತೆ ಮೇಜಿನಮೇಲಿಟ್ಟೆ. ಮತ್ತೆ ಮಂತ್ರ ಗೋಲಿನಿಂದ ತಾಕಿಸಿದೆ. ಮೊತ್ತಮೊದಲು ಇದ್ದಂತೆ ಪಾಕೀಸ್ತಾನದ ಪತಾಕೆಯಿದ್ದ ಪೆಟ್ಟಿಗೆಯೊಳಗೆ ಪಾಕೀಸ್ತಾನ್ ಪತಾಕೆಯೂ, ನಮ್ಮ ದೇಶದ ಬಾವುಟವಿದ್ದ ಪೆಟ್ಟಿಗೆಯಲ್ಲಿ ಭಾರತದ




ಬಾವುಟವೂ ಬಂದುಬಿಟ್ಟಿತು. ಇದನ್ನು ನೋಡಿ ಜನರೆಲ್ಲಾ ಆಶ್ಚರ್ಯಚಕಿತರಾದರು.

ಬೆಂಕಿಪೆಟ್ಟಿಗೆಗಳನ್ನು ನಾವು ಮೊದಲು ಸಿದ್ಧಪಡಿಸಿಟ್ಟುಕೊಳ್ಳಬೇಕು. ಈ ಮೇಲಿರುವ ಚಿತ್ರವನ್ನು ನೋಡಿ. ಇದರಲ್ಲಿ '1' ಗುರುತಿರುವ ಪೆಟ್ಟಿಗೆಯಲ್ಲಿ ನಮ್ಮ ದೇಶದ ಮೂರು ಬಣ್ಣದ ಬಾವುಟವಿದೆ; '2' ಗುರುತಿರುವ ಪೆಟ್ಟಿಗೆಯಲ್ಲಿ ಪಾಕೀಸ್ತಾನದ ಪತಾಕೆ ಇದೆ.

ಈ ಪೆಟ್ಟಿಗೆಗಳನ್ನು ಮೊದಲು ಪ್ರೇಕ್ಷಕರಿಗೆ ತೋರಿಸಿ, ಮತ್ತೆ ಮೇಜಿನಮೇಲೆ ಇಡುವಾಗ ಮಗುಚಿಟ್ಟರೆ '1' ಗುರುತಿರುವ ಪೆಟ್ಟಿಗೆಯಿಂದ ಪಾಕೀಸ್ತಾನದ ಪತಾಕೆಯೂ, '2' ಗುರುತಿರುವ ಪೆಟ್ಟಿಗೆಯಿಂದ ಭಾರತೀಯ ಪತಾಕೆಯೂ ಹೊರಬೀಳುವುದು! ಈ ವಿಭಾಗವನ್ನು ಹೇಗೆ ಸಿದ್ಧಪಡಿಸಿಟ್ಟುಕೊಂಡಿರಬೇಕೋ '3' ಗುರುತಿರುವ ಚಿತ್ರದಲ್ಲಿ ನೋಡಿ.

ಮೊದಲು ನಾವು ಖಾಲಿ ಬೆಂಕಿಪೆಟ್ಟಿಗೆಗಳನ್ನು ತಂದು ಅವುಗಳನ್ನು ತುಸಹೊತ್ತು ನೀರಿನಲ್ಲಿ ನೆನೆಯಿಸಿ ಅದರಮೇಲಿರುವ ಲೇಬಲ್ಲುಗಳನ್ನು ಹರಿಯದಂತೆ ತೆಗೆದು, ಬ್ಲಾಟಿಂಗ್ ಪೇಪರು ಸಹಾಯದಿಂದ ತೇವವನ್ನು ಒಣಗಿಸಬೇಕು. ನಾವು ಉಪಯೋಗಿಸಬೇಕೆಂದು ಆರಿಸಿದ್ದ ಪೆಟ್ಟಿಗೆಗಳಿಗೆ, ಈ ಕಳಚಿದ ಒಂದೇ ವಿಧವಾದ ಲೇಬಲ್ಲುಗಳನ್ನು ಹಿಂದೆ ಮತ್ತೆ ಮುಂದೆ ಅಂಟಿಸಬೇಕು. ಈರೀತಿ ಅಂಟಿಸಿದರೆ ನಾವು ಬೆಂಕಿಪೆಟ್ಟಿಗೆಯನ್ನು ಹಿಂದೆ ಮುಂದೆ ತಿರುಗಿಸುವುದು ಪ್ರೇಕ್ಷಕರು ತಿಳಿಯಲಾರರು. ಒಳಗೆ ಬೆಂಕಿಕಡ್ಡಿಗಳಿರುವ ಪೆಟ್ಟಿಯ ತಳಭಾಗವನ್ನು ಕಿತ್ತು ಹಾಕಬೇಕು. ಅದಕ್ಕೆ '3'ನೇ ಚಿತ್ರದಲ್ಲಿ ತೋರಿಸಿರುವಂತೆ ಅಂಕಣಗಳನ್ನೇರ್ಪಡಿಸಬೇಕು. ಮೇಲೆ ಕಾಣಿಸುವ ಖಾನೆಯಲ್ಲಿ ಒಂದು ಪತಾಕೆಯನ್ನು, ತಳಭಾಗದಲ್ಲಿರುವ ಖಾನೆಯಲ್ಲಿ ಮತ್ತೊಂದು ಪತಾಕೆಯನ್ನೂ ಇಟ್ಟುಕೊಂಡಿರಬೇಕು. ಆಗ ಒಂದೇ ಬೆಂಕಿಪೊಟ್ಟಣವನ್ನು ಒಂದುಕಡೆ ತಿರುಗಿಸಿದರೆ ಒಂದು ಬಾವುಟವೂ, ಅದನ್ನು ಮಗುಚಿ ಎರಡನೇ ಕಡೆ ನೋಡಿದರೆ ಬೇರೊಂದು ಬಾವುಟವೂ ಕಾಣುವುದು.

ಪ್ರೇಕ್ಷಕರಿಗೆ, ಮೊದಲು ಈ ಪೆಟ್ಟಿಗೆಯಲ್ಲಿ ಪತಾಕೆಯೂ, ಆ ಪೆಟ್ಟಿಗೆಯಲ್ಲಿ ಬೇರೊಂದು ಪತಾಕೆಯೂ ಇರುವುದನ್ನು ತೋರಿಸಿದ ಕೂಡಲೇ ಅವುಗಳನ್ನು ಮೇಜಿನಮೇಲೆ ಇಡುವಾಗ ತಲೆಕೆಳಕಾಗಿ ಇಡಬೇಕೆಂದಾಯಿತು. ಬೇಕಾದರೆ ಎರಡು ಪೆಟ್ಟಿಗೆಗಳಲ್ಲೂ ಭಾರತದ ಬಾವುಟವನ್ನೇ ತೋರಿಸಬಹುದು. ಇಲ್ಲ, ಪಾಕೀಸ್ತಾನದ ಪತಾಕೆಯನ್ನೇ ತೋರಿಸಬಹುದು.

### ಇನ್ನೊಂದು ಕೃತಿಚೌರ್ಯ?

ಕಳೆದ ತಿಂಗಳು 'ಬಣ್ಣದ ಬೀಸಣಿಕೆ' ಯೆಂಬ ಪದ್ಯವು ಚಂದಮಾಮದಲ್ಲಿ ಪ್ರಕಟವಾಯಿತಷ್ಟೆ? ಮುಳವಾಡದ ಶ್ರೀ ಪರಶುರಾಮ, ಹ. ಚಿತ್ರಗಾರರೆಂಬುವರು ನಮಗೆ ಪತ್ರಬರೆದು—ಆ ಪದ್ಯವು ತಾವು ರಚಿಸಿದುದೆಂದೂ, ಅದನ್ನು ಬರೆದು ಕವರಿನಲ್ಲಿ ಹಾಕಿ ಪೋಸ್ಟುಮಾಡಲು ಮಿತ್ರರಾದ ಶ್ರೀ ಹನುಮಂತ ಯಮುನಪ್ಪ ಜಲ್ಲಿ ಎಂಬುವರ ಕೈಗೆ ಬಾಗಲುಕೋಟೆ ಸ್ಟೇಷನದಲ್ಲಿ ಕೊಟ್ಟರೆಂದೂ ಆದರೆ ಆ ಮಿತ್ರರು ಮಿತ್ರದ್ರೋಹಮಾಡಿ ಆ ಕವರು ಒಡೆದು ಆ ಕವನ ತಮ್ಮ ಸ್ವಂತ ಹೆಸರಿನಲ್ಲಿ ಬರೆದು ಪ್ರಕಟನೆಗೆ ಕಳುಹಿಸಿ ಕೃತಿಚೌರ್ಯ ಮಾಡಿದ್ದಾರೆಂದೂ ವಿಷಾದಿಸಿದ್ದಾರೆ. ಇದು ನಿಜವಾಗಿದ್ದಲ್ಲಿ ಬಹಳ ಶೋಚನೀಯ. ಇದರಿಂದ ಇತರರು ಮುಂದೆ ಪಾಠ ಕಲಿಯಲೆಂದು ಕೋರುತ್ತೇನೆ.

—ಚಂದಮಾಮ.

# ಮುಖಚಿತ್ರ

ಶ್ರೀಕೃಷ್ಣ ಬಲರಾಮರು ತಮ್ಮ ವಿದ್ಯಾಭ್ಯಾಸ ಮುಗಿಸಿಕೊಂಡು ಗುರುದಕ್ಷಿಣೆಯೇನು ಬೇಕೆಂದು ಕೇಳಿದುದೂ, ಗುರುವಿನ ಆಜ್ಞೆಯಂತೆ ಸತ್ತು ಸ್ವರ್ಗದಲ್ಲಿದ್ದ ಗುರು ಪುತ್ರನನ್ನು ಬದುಕಿಸಿ ತಂದು ಸಮರ್ಪಿಸಿದುದೂ ನಿಮಗೆಲ್ಲಾ ಹಿಂದೆಯೇ ಹೇಳಿದೆ.

ಈ ವಿಚಾರ ತಿಳಿದಂದಿನಿಂದ ದೇವಕಿದೇವಿಗೆ ಆಶ್ಚರ್ಯಮಾತ್ರವಲ್ಲ, ಅತಿ ಕುತೂಹಲವೂ ಜನಿಸಿತು. ತನ್ನ ಮುದ್ದುಕುವರ ಕೃಷ್ಣನ ಮಹಿಮೆಗೆ ಆನಂದವುಂಟಾದರೂ ಕೃಷ್ಣನಿಗೆ ಮೊದಲು ಜನಿಸಿ ಕಂಸನಿಂದ ಅಪಮೃತ್ಯು ಹೊಂದಿದ ತನ್ನ ಶಿಶುಗಳನ್ನು ನೆನೆಸಿ ನೆನೆಸಿ ಅತೀವ ದುಃಖವುಂಟಾಗತೊಡಗಿತು. ಕೃಷ್ಣನು ತನ್ನ ಪುತ್ರನೇ ಇರುವಾಗ ತಾನೂ ತನ್ನ ಆ ಕಂದಮ್ಮಗಳನ್ನು ಮತ್ತೊಮ್ಮೆ ಮನದಣಿಯ ನೋಡಿ ಮುದ್ದಾಡಿ ಏಕೆ ಆನಂದಿಸ ಬಾರದು, ಎಂದು ಆಲೋಚಿಸಿದಳು. ರಾಮಕೃಷ್ಣರನ್ನು ಬರಮಾಡಿ "ಅಪ್ಪಾ, ಕೃಷ್ಣ! ನೀನು ನನ್ನುದರದಲ್ಲಿ ಜನಿಸಿದರೂ ನೀನು ಅವತಾರಪುರುಷನೆಂಬ ವಿಚಾರ ನನಗೆ ತಿಳಿದಿದೆ. ನಿನಗೆ ಅಸಾಧ್ಯವೆಂಬುದೇ ಇಲ್ಲ. ನೀನು ಹಿಂದೆ ಗುರುಪುತ್ರನನ್ನು ಬದುಕಿಸಿ ತಂದಂತೆ ಕಂಸನು ಕೊಂದ ನನ್ನ ಶಿಶುಗಳನ್ನೂ ಒಂದುಸಲ ಬರಮಾಡಿ ನನ್ನ ಮಾತೃ ಹೃದಯವನ್ನು ತೃಪ್ತಿಗೊಳಿಸು" ಎಂದು ಕೋರಿದಳು.

ತಕ್ಷಣವೇ ಬಲರಾಮಕೃಷ್ಣರು ಸುತಲವನ್ನು ಪ್ರವೇಶಿಸಿದರು. ಅಲ್ಲಿ ದೈತ್ಯರಾಜ ಬಲಿಚಕ್ರವರ್ತಿಯು ಅತ್ಯಾನಂದಭರಿತನಾಗಿ ಎದುರುಗೊಂಡು ಉಪಚರಿಸಿ "ಓ ಮಹಾನುಭಾವಾ, ನಿಮ್ಮ ದರ್ಶನಭಾಗ್ಯದಿಂದ ನಾನು ಧನ್ಯನಾದೆ. ನನ್ನನ್ನು ಅನುಗ್ರ ಹಿಸಿ ಬಂದಕಾರ್ಯ ತಿಳಿಸಬೇಕು" ಎಂದು ಪ್ರಾರ್ಥಿಸಿದ.

ಆಗ ಶ್ರೀಕೃಷ್ಣನು "ಮಹಾರಾಜಾ, ಹಿಂದೆ ಸ್ವಾಯಂಭುವ ಮನ್ವಂತರದಲ್ಲಿ ಮರೀಚಿಗೆ ಆರು ಪುತ್ರರು ಹುಟ್ಟಿ ಪ್ರಜಾಧಿಪತಿಯಾದ ಬ್ರಹ್ಮನಲ್ಲಿ ಅಪರಾಧ ಮಾಡಿ ಶಾಪ ಪಡೆದರು. ಆ ಕಾರಣ ರಾಕ್ಷಸನಾದ ಹಿರಣ್ಯಕಶಿಪುವಿನ ಮಕ್ಕಳಾಗಿ ಹುಟ್ಟಿದರು. ನಂತರ ದೈವೇಚ್ಛೆಯಂತೆ ದೇವಕಿದೇವಿಯ ಗರ್ಭದಲ್ಲಿ ಜನಿಸಿ ಕಂಸನಿಂದ ಕೊಲ್ಲಲ್ಪಟ್ಟರು. ಅವರು ಈಗ ನಿನ್ನ ಬಳಿ ಇರುವರು. ನನ್ನ ತಾಯಿಯ ದುಃಖ ಶಮನಾರ್ಥವಾಗಿ ಇವರನ್ನು ಕೊಂಡೊಯ್ಯಬೇಕೆಂದು ಬಂದಿದ್ದೇನೆ. ನನ್ನ ಅನುಗ್ರಹದಿಂದ ಇವರು ಶಾಪ ವಿಮುಕ್ತರಾಗಿ ಮುಂದೆ ಸದ್ಗತಿ ಹೊಂದುವರು" ಎಂದು ಹೇಳಿದನು.

ಆಗ ಬಲೀಂದ್ರನು ಸ್ಮರ, ಉದ್ಗೀಥ, ಪರಿಷ್ವಂಗ, ಪತಂಗ, ಕ್ಷುದ್ರಭುಕ್, ಘೃಣಿ ಎಂಬ ಆ ಆರು ಮಕ್ಕಳನ್ನೂ ತಂದು ಕೃಷ್ಣನ ವಶಕ್ಕೊಪ್ಪಿಸಿ ಕಳುಹಿಸಿದನು. ಕೃಷ್ಣನು ಆ ಶಿಶುಗಳೊಂದಿಗೆ ಬಂದೊಡನೆಯೇ ದೇವಕಿದೇವಿಯು ಅತಿ ಆನಂದಭರಿತಳಾಗಿ ಪುತ್ರ ವಾತ್ಸಲ್ಯದಿಂದ ಅವುಗಳನ್ನು ಬಾರಿಬಾರಿಗೂ ಆಲಂಗಿಸಿ ಮುದ್ದಾಡಿದಳು.

ಕಡೆಗೆ ಕೃಷ್ಣಾನುಗ್ರಹದಿಂದ ಆ ಶಿಶುಗಳಿಗೆ ಜ್ಞಾನೋದಯವಾಗಿ ಎಲ್ಲರ ಅಪ್ಪಣೆ ಪಡೆದು ದಿವ್ಯಲೋಕಕ್ಕೆ ತೆರಳಿದರು. ದೇವಕಿಯು ಕೃಷ್ಣನ ಮಾಯೆಗೆ ಬೆರಗಾದಳು.

# ಬಣ್ಣದ ಚಿತ್ರ ಕಥೆ—ಚಿತ್ರ - 5

ಮರದ ಆಕಾರದಲ್ಲಿದ್ದ ಒಂದು ಭಯಂಕರ ಸ್ವರೂಪವು ಶಾನ್‌ಮಿಂಗಳ ಕೈಹಿಡಿದು ಎಳೆಯಿತೆಂದು ಹೇಳಿತ್ತಲ್ಲವೆ?—ಶಾನ್‌ಮಿಂಗ್‌ಗೆ ಹೃದಯವೇ ಹಾರಿಹೋದಂತಾಯಿತು. ಆ ಸ್ವರೂಪವು ಆಕೆಯೊಡನೆ "ಬಾ, ಹುಡುಗಿ, ನನ್ನೊಡನೆ ಬಾ, ಸೌದೆ ಒಡೆದು ಹಾಕುವಿಯಂತೆ" ಎಂದು ಅನ್ನುವಷ್ಟರಲ್ಲಿ ಆಕೆಗೆ ಇನ್ನಷ್ಟು ಗಾಭರಿಯುಂಟಾಯಿತು.

ಅಷ್ಟರೊಳಗೆ ಒಬ್ಬಾನೊಬ್ಬ ಯುವಕನು ಆಕಡೆ ಬರುತ್ತಿದ್ದುದು ಕಾಣಿಸಿತು. ಆತನು ಬರುವುದನ್ನು ಕಂಡ ಕೂಡಲೇ ಆ ಭಯಂಕರಸ್ವರೂಪವು ಇದ್ದಕ್ಕಿದ್ದಹಾಗೆ ಆಕೆಯ ಕೈ ಬಿಟ್ಟು ವಾಯುವೇಗದಿಂದ ಓಡತೊಡಗಿತು. ಶಾನ್‌ಮಿಂಗಿಗೆ ದೊಡ್ಡ ಪೀಡೆ ಕಳೆದಂತಾಯಿತು. ಆ ಬಂದಾತ ಚಾಂಗ್. ಸಮಯಕ್ಕೆ ಸರಿಯಾಗಿ ನೇರಿಟ್ಟಂತೆ ಆತ ಬಂದುದು ಅದೃಷ್ಟವಲ್ಲದೆ ಮತ್ತೇನು ಎಂದುಕೊಂಡು ಶಾನ್‌ಮಿಂಗ್ ಸಂತೋಷಿಸಿದಳು. ತನ್ನ ಮನಸ್ಸಿನಲ್ಲಿದ್ದ ಈ ಸಂಗತಿಯನ್ನು ಆತನೊಡನೆ ತಿಳಿಸಿದಳು. ಅದುವರೆಗೂ ಶಾನ್‌ಮಿಂಗ್ ಯುವಕರೊಡನೆ ಮಾತನಾಡಿದರೆ ಅಡ್ಡಿ ಪಡಿಸುತ್ತಿದ್ದ ಆ ಕೊಡೆಯೂ ಈಗ ಸುಮ್ಮನಿದ್ದಿತು. ಇದನ್ನು ಗಮನಿಸಿದ ಶಾನ್‌ಮಿಂಗ್ ಆಶ್ಚರ್ಯಕ್ಕೆ ಮೇರೆಯೇ ಇಲ್ಲ.

"ಚಾಂಗ್, ನೀನು ನನಗೆ ಮಾಡಿದ ಈ ಉಪಕಾರ ಈ ಜನ್ಮದಲ್ಲಿ ಮರೆಯಲಾರೆ. ನಿನ್ನಂತಹ ಉಪಕಾರಿಯನ್ನು ಕಂಡರೆ ನನ್ನ ತಂದೆಗೂ ಎಷ್ಟೋ ಸಂತೋಷ. ಬಾ, ನಮ್ಮ ಮನೆಗೆ ಹೋಗೋಣ" ಎಂದು ಆತನನ್ನು ಕರೆದುಕೊಂಡು ಹೋದಳು. ಶಾನ್‌ಮಿಂಗ್ ತಂದೆಯು ಈ ವಿಚಿತ್ರವನ್ನೆಲ್ಲಾ ಕೇಳಿ ಆಶ್ಯರ್ಯಪಟ್ಟ. ಧೀರನೂ ಉಪಕಾರಿಯೂ ಆದ ಚಾಂಗ್‌ನನ್ನು ಕಂಡು ತುಂಬಾ ಸಂತೋಷಿಸಿದ.

"ಚಾಂಗ್, ನನ್ನ ಮಗಳನ್ನು ನಿನಗೆ ವಿವಾಹ ಮಾಡಿ' ಕೊಡುವೆ. ನೀನು ಮಾಡಿಕೊಳ್ಳುವಿಯಾ?" ಎಂದು ಕೇಳಿದ. ಚಾಂಗ್‌ಗೆ ಸಿಕ್ಕಿನಲ್ಲಿ ಬಿದ್ದಂತಾಯಿತು. ಆತನ ಮೌನವನ್ನು ನೋಡಿ ಪಿತನು "ಹೋಗಲಿ. ನೀನು ಚಿಕ್ಕವ. ಆದುದರಿಂದ ನೀನು ಈಗ ಹೇಳಲಾರೆ: ನಿನ್ನ ತಂದೆಯೊಡನೆಯೇ ಈ ವಿಚಾರ ಮಾತನಾಡುವೆನು. ಒಂದುಸಾರಿ ಆತನನ್ನು ಇಲ್ಲಿಗೆ ಬರಹೇಳುವಿಯಾ?" ಎಂದ.

ಅದಕ್ಕೆ ಚಾಂಗನು ವಿನಯದಿಂದ "ನನಗೆ ಪಿತನು ಈಗ ಇಲ್ಲ. ನನ್ನ ತಾಯಿಯೇ ನನ್ನ ಪೋಷಕಳು" ಎಂದು ಹೇಳಿದನು.

"ಹಾಗೋ! ಹಾಗಾದರೆ ನಿನ್ನ ತಾಯಿಯನ್ನೇ ಬರಹೇಳಬಹುದಲ್ಲ" ಎಂದು ಆತನು ಕೇಳಲು ಚಾಂಗನು ಮನೆಗೆಹೋಗಿ ತಾಯಿಗೆ ಎಲ್ಲಹೇಳಿ ಕಳುಹಿಸಿದನು.

ಶಾನ್‌ಮಿಂಗ್ ತಂದೆಯು ಆಕೆಯನ್ನು ಆದರಿಸಿ ಆಕೆಯೊಡನೆ ವಿವಾಹ ವಿಷಯ ಮಾತನಾಡಿದನು. ಆದರೆ ಆ ಸಂಭಾಷಣೆಗಳ ಫಲಿತಾಂಶವೇನೆಂಬುದನ್ನು ಮುಂದಿನ ತಿಂಗಳು ಚಿತ್ರ ಸಹಿತ ನೋಡಿರಿ.

# "ಕುಂಭಕರ್ಣ"

ರಾವಣನ ಅಗ್ರಜ ಕುಂಭಕರ್ಣನ ಹೆಸರನ್ನು ಕೇಳಿರುವಿರಲ್ಲವೆ? ಅವನು ಬೆಟ್ಟದಂತಹ ಗಾತ್ರವುಳ್ಳ ಮನುಷ್ಯ. ಸಹಸ್ರ ಆನೆಯ ಬಲವುಳ್ಳವನು. ಗಾಡಿಗಟ್ಟಲೆ ಆಹಾರ ಬೇಕು. ನಿದ್ರೆ ಎಂದರೆ ಅವನಿಗೆ ಪ್ರಾಣ. ವರ್ಷಕ್ಕೆ ಆರುತಿಂಗಳು ನಿದ್ರೆ. ನಿದ್ದೆ ಮಾಡುತ್ತಿದ್ದಾಗ ಮೈಮೇಲೆ ಎಚ್ಚರವೇ ಇರುತ್ತಿರಲಿಲ್ಲ. ಅಷ್ಟು ದೊಡ್ಡ ಮನುಷ್ಯಪ್ರಾಣಿಗೆ ಕ್ಷೌರ ಮಾಡಬೇಕೆಂದರೆ ಸಾಮಾನ್ಯವೆ? ನೂರಾರು ಜನ ಕ್ಷೌರಿಕರು ಹತ್ತಾರುಕಡೆ ದೊಡ್ಡ ದೊಡ್ಡ ಏಣಿಗಳನ್ನು ಹಾಕಿಕೊಂಡು ತಿಂಗಳುಗಟ್ಟಲೆ ಮಾಡಬೇಕಾಗುತ್ತಿತ್ತು.

ಒಮ್ಮೆ ಹೀಗೆ ಕ್ಷೌರಮಾಡುತ್ತಿರುವಾಗ್ಗೆ ಮೂಗಿನಸೊಳ್ಳೆಯ ಬಳಿ ಮಾಡುತ್ತಿದ್ದ ಇಬ್ಬರು ತಮ್ಮ ತಮ್ಮ ಕತ್ತಿಗಳನ್ನು ಹಿಡಿದುಕೊಂಡಿದ್ದಂತೆಯೇ ಸೊಳ್ಳೆಯೊಳಗೆ ನುಸುಳಿಬಿಟ್ಟರು. ಕಾರಣ, ನಿದ್ರಿಸುತ್ತಿದ್ದ ಕುಂಭಕರ್ಣ ಮಹಾರಾಜ ಒಂದುಸಾರಿ ಉಸಿರು ಒಳಕ್ಕೆ ಎಳೆದುಕೊಂಡ. ಅಷ್ಟು ದೊಡ್ಡ ಪ್ರಾಣಿಯ ಮೂಗಿನ ಹೊಳ್ಳೆ ಹೇಗಿರಬೇಕು ನೀವೇ ಯೋಚಿಸಿ. ದೊಡ್ಡ ಗುಹೆಗಳಂತಿದ್ದುವು. ಒಳಕ್ಕೆ ನುಸುಳಿಕೊಂಡ ಅವರಿಗೆ ದಿಕ್ಕೇ ತೋಚದಂತಾಯಿತು. ಎಲ್ಲೋ ಕಗ್ಗತ್ತಲೆಯ ಕಾಡಿನಲ್ಲಿ ಬಂದಂತಾಯಿತು ಎಲ್ಲಾಕಡೆಯೂ ಅಂಧಕಾರ ಕವಿದಿದೆ. ಪಾಪ! ಹೊರಕ್ಕೆ ಬರಲು ಬಹಳ ಒದ್ದಾಡಿದರು; ಸಾಧ್ಯವಾಗಲಿಲ್ಲ. ಕಳೆದುಕೊಂಡಿದ್ದ ತಮ್ಮ ಕತ್ತಿಗಳನ್ನು ಹುಡುಕಿಕೊಂಡು ಹೊರಟರು. ನಾಲ್ಕಾರುದಿನ ಸುತ್ತಿದರೂ ಕತ್ತಿಗಳ ಸುಳಿವು ಹತ್ತಲಿಲ್ಲ. ಹಸಿವು ಜಾಸ್ತಿಯಾಗುತ್ತ ನಡೆಯಿತು.

ಹಾಗೆಯೇ ಹುಡುಕುತ್ತಾ ಮುಂದೆ ಹೋಗುತ್ತಿರುವಾಗ್ಗೆ ದೂರದಲ್ಲಿ ಯಾರೋ ಬರುತ್ತಿರುವಂತೆ ಕಂಡಿತು. ಓಡಿಹೋಗಿ ನೋಡುವಲ್ಲಿ ಒಬ್ಬ ಗಡ್ಡದವನು ಏನನ್ನೋ ಕಳೆದುಕೊಂಡು ಹುಡುಕುತ್ತಿರುವಂತೆ ಕಂಡಿತು. ಅವನನ್ನು ಕುರಿತು "ಅಯ್ಯಾ! ನಮ್ಮ ಕತ್ತಿಗಳನ್ನು ಕಳೆದುಕೊಂಡು ಬಿಟ್ಟಿದ್ದೇವೆ. ಹೊರಕ್ಕೆ ಹೋಗುವ ದಾರಿ ತಿಳಿಯದೆ ಒದ್ದಾಡುತ್ತಿದ್ದೇವೆ. ಹೇಗಾದರೂ ಮಾಡಿ ನಮ್ಮನ್ನು ಹೊರಕ್ಕೆ ಸಾಗಿಸಪ್ಪ!" ಎಂದು ಕೈಕಾಲು ಕಟ್ಟಿಕೊಂಡರು. ಆ ಗಡ್ಡದ ಮನುಷ್ಯನಿಗೆ ತುಂಬಾ ಗಾಭರಿಗೆ ಇಟ್ಟುಕೊಂಡಿತು. "ಅಯ್ಯೋ ಮಹರಾಯ! ನಾನು ನಾಲ್ಕು ದಿನದ ಹಿಂದೆ ಕುದುರೆಯನ್ನೇರಿ ಬರುತ್ತಿದ್ದೆ. ಏನೋ ದೊಡ್ಡ ಬಿರುಗಾಳಿ ಬಂದಂತೆ ಆಗಿ ನನ್ನನ್ನು ಕುದುರೆಯೊಂದಿಗೆ ಸೆಳೆದುಕೊಂಡು ಹೋಯಿತು; ಕಣ್ಣು ಮುಚ್ಚಿದಂತಾಯಿತು. ಅಂಧಕಾರ ಕವಿಯಿತು. ದಿಕ್ಕೇ ತೋಚದಂತಾಗಿದೆ. ಈಗ ನಾನು ಎಲ್ಲಿದ್ದೇನೆ? ಏನುಕಥೆ ಒಂದೂ ತಿಳಿಯದಂತಾಗಿದೆ. ನನ್ನ ಕುದುರೆಯನ್ನು ಹುಡುಕಿಕೊಂಡು ಬರುತ್ತಿದ್ದೇನೆ. ಕುದುರೆಯೇ ಕಾಣದಿದ್ದ ಮೇಲೆ ನಿಮ್ಮ ಕತ್ತಿಗಳು ಹೇಗೆ ತಾನೇ ಸಿಕ್ಕಾವು?" ಎಂತ ಕೇಳಿದ.

ಕ್ಷೌರಿಕರಿಗೆ ಇನ್ನೂ ಗಾಭರಿಯಾಯಿತು. "ಅಯ್ಯೋ! ನೋಡು! ಈಗ ನಾವು ಕುಂಭಕರ್ಣ ಮಹಾರಾಜನ ಮೂಗಿನೊಳಗೆ ಸೇರಿಕೊಂಡು ಬಿಟ್ಟಿದ್ದೇವೆ. ಆ ಮಹಾರಾಯನಿಗೋ ಆರುತಿಂಗಳು ನಿದ್ರೆ. ಅವನಿಗೆ ಎಚ್ಚರವಾಗುವುದು ಯಾವಾಗ? ನಾವು ಹೊರಗೆ ಹೋಗುವ ಬಗೆ ಏನು?" ಎಂತ ಎಲ್ಲರೂ ಗೋಳಾಡಲಾರಂಭಿಸಿದರು. ಕೊನೆಗೆ ಗಡ್ಡದವನೊಂದು ಉಪಾಯ ಹೂಡಿದ. ತನ್ನಲ್ಲಿ ಸಾರಿಗೆಂದು ಇಟ್ಟಿದ್ದ ಖಾರದ ಪುಡಿ ಇತ್ತು. ಅದನ್ನು ತೆಗೆದುಕೊಂಡು ಪೊಟ್ಟಣಬಿಚ್ಚಿ ತೂರಿಬಿಟ್ಟ. ಖಾರದಪುಡಿ ಮೂಗಿನಲ್ಲೆಲ್ಲಾ ವ್ಯಾಪಿಸಿಕೊಂಡು ತುಂಬಾ ಘಾಟು ಆಗಿಬಿಟ್ಟಿತು. ಆ ಘಾಟಿಗೆ ಕುಂಭಕರ್ಣ ಮಹಾರಾಜ ಒಂದುಸಾರಿ "ಅಕ್ಷಿ" ಎಂದು ಸೀನಿದ. ಕೂಡಲೆ ಕ್ಷೌರಿಕರೂ, ಗಡ್ಡದವನೂ, ಕುದುರೆಯೂ, ಕತ್ತಿಗಳೂ, ಎಲ್ಲವೂ ತುಪಾಕಿ ಗುಂಡಿನಂತೆ ಹೊರಕ್ಕೆ ಸೆಯಲ್ಪಟ್ಟವು. ಬದುಕಿತು ಬಡಜೀವ ಎಂದುಕೊಂಡು ದಿಕ್ಕಿಗೊಬ್ಬರು ಓಡಿಹೋದರು.

—ಎಸ್. ಎನ್. ಸ್ವಾಮಿ, ಅಜ್ಜಂಪುರ.

## ಒಂದೇ ಗೆರೆಯ ಚಿತ್ರ



ಎನ್. ಎಸ್. ವೆಂಕಟಸುಬ್ಬಯ್ಯ - ತಿರುಪತಿ



Printed by B. NAGIREDDI at the B. N. K. Press Ltd, Madras 24, and Published by him from Chandamama Publications, Madras 24. Controlling Editor : SRI CHAKRAPANI



Chandamama, May '52 Photo by Pranlal K. Patel

ಅರಸುತನ

